WPP-47/ 2009 - 2011



# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

## ವಿಶೇಷ ಪತ್ರಿಕೆ

| ಭಾಗ – III | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೨೯, ೨೦೧೧ (ಆಶ್ವಯುಜ ೭, ಶಕ ವರ್ಷ ೧೯೩೩) | ನಂ. ೮೫೬ |
|---|---|---|

**ನೋಂದಣಿ ಮತ್ತು ಮುದ್ರಾಂಕ ಇಲಾಖೆ**

**ತಿದ್ದುಪಡಿ ಅಧಿಸೂಚನೆ**

**ಸಂಖ್ಯೆ: CVC-19/10-11, ಬೆಂಗಳೂರು, ದಿನಾಂಕ: 26–09–2011**

ಅಧಿಸೂಚನೆ ಸಂಖ್ಯೆ: ಸಿವಿಸಿ–19/2010–11, ದಿನಾಂಕ: 21.09.2011 ಕರ್ನಾಟಕ ರಾಜ್ಯ ವಿಶೇಷ ಪತ್ರಿಕೆ ದಿನಾಂಕ: 21.09.2011 ರಲ್ಲಿ ಪ್ರಕಟಿಸಿರುವ ಬೆಂಗಳೂರು ನಗರ ಜಿಲ್ಲೆಯ ನೋಂದಣಿ ಜಿಲ್ಲೆಗಳಾದ 1) ಬಸವನಗುಡಿ, 2) ಜಯನಗರ, 3) ಗಾಂಧಿನಗರ, 4) ರಾಜಾಜಿನಗರ ಮತ್ತು 5) ಶಿವಾಜಿನಗರ ಜಿಲ್ಲಾ ನೋಂದಣಿ ಕಛೇರಿಗಳಿಗೆ ಸಂಬಂಧಿಸಿದಂತೆ ಸ್ಥಿರಾಸ್ತಿಗಳು ಮತ್ತು ಕಟ್ಟಡಗಳ ಅಂದಾಜು ಮಾರುಕಟ್ಟೆ ದರಗಳ ಪಟ ಸಂಖ್ಯೆ: 4ರ ವಾಹನ ನಿಲ್ದಾಣ ದರಗಳ ಕ್ರಮ ಸಂಖ್ಯೆ: 2 ರಲ್ಲಿ ರೂ. 50,00,001/– ರಿಂದ ರೂ. 1,00,00,000/– ಗಳವರೆಗೆ ಮೇಲ್ಛಾವಣಿಯುಳ್ಳ ಕಾರ್ ಪಾರ್ಕಿಂಗ್‌ಗೆ ರೂ. 1,35,000/– ಗಳ ಬದಲಾಗಿ ರೂ. 1,50,000/– ಗಳೆಂದು ಮತ್ತು ಮೇಲ್ಛಾವಣಿ ರಹಿತ ಕಾರ್ ಪಾರ್ಕಿಂಗ್‌ಗೆ ರೂ. 1,10,000/– ಗಳ ಬದಲಾಗಿ ರೂ. 1,25,000/– ಗಳೆಂದು ಓದಿಕೊಳ್ಳತಕ್ಕದ್ದು.

**ಕಾರ್ಯದರ್ಶಿಗಳು**
ಕೇಂದ್ರ ಮೌಲ್ಯ ಮಾಪನ ಸಮಿತಿ,
ಬೆಂಗಳೂರು.

## ವಿಶೇಷ ಪತ್ರಿಕೆ

| ಭಾಗ – III | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೨೯, ೨೦೧೧ (ಆಶ್ವಯುಜ ೭, ಶಕ ವರ್ಷ ೧೯೩೩) | ನಂ. ೮೫೭ |
|---|---|---|

**ನೋಂದಣಿ ಮತ್ತು ಮುದ್ರಾಂಕ ಇಲಾಖೆ**

**ತಿದ್ದುಪಡಿ ಅಧಿಸೂಚನೆ**

**ಸಂಖ್ಯೆ: CVC-19/10-11, ಬೆಂಗಳೂರು, ದಿನಾಂಕ: 26–09–2011**

ಅಧಿಸೂಚನೆ ಸಂಖ್ಯೆ: ಸಿವಿಸಿ–19/2010–11, ದಿನಾಂಕ: 21.09.2011 ಕರ್ನಾಟಕ ರಾಜ್ಯ ವಿಶೇಷ ಪತ್ರಿಕೆ ದಿನಾಂಕ: 21.09.2011 ರಲ್ಲಿ ಪ್ರಕಟಿಸಿರುವ ಬೆಂಗಳೂರು ನಗರ ಜಿಲ್ಲೆ, ಜಯನಗರ ಜಿಲ್ಲಾ ನೋಂದಣಿ ಕಛೇರಿ, ಜೆ.ಪಿ.ನಗರ ಉಪ ನೋಂದಣಿ ಕಛೇರಿ ವ್ಯಾಪ್ತಿಯ ಸ್ಥಿರಾಸ್ತಿಗಳು ಮತ್ತು ಕಟ್ಟಡಗಳ ಅಂದಾಜು ಮಾರುಕಟ್ಟೆ ದರಗಳ ಪಟ ಸಂಖ್ಯೆ: 91 ರಿಂದ 96ರ ವರೆಗಿನ ಅಪಾರ್ಟ್‌ಮೆಂಟ್‌ಗಳ ಶಿರೋನಾಮೆ ಅದಲು ಬದಲಾಗಿದ್ದು, ಕಾಲಂ ನಂ. 5ರಲ್ಲಿ (ಮಹಾನಗರ ಪಾಲಿಕೆ ವ್ಯಾಪ್ತಿಯ) ಮಾರ್ಬಲ್/ಗ್ರಾನೈಟ್ ಎಂಬುದಕ್ಕೆ ಬದಲಾಗಿ ಮೊಸಾಯಿಕ್ / ಸೆರಾಮಿಕ್ / ವಿಟ್ರಿಫೈಡ್ ಟೈಲ್ಸ್ ಎಂತಲು ಕಾಲಂ ನಂ. 6ರಲ್ಲಿ ಮೊಸಾಯಿಕ್ / ಸೆರಾಮಿಕ್ / ವಿಟ್ರಿಫೈಡ್ ಟೈಲ್ಸ್ ಎಂಬುದಕ್ಕೆ ಬದಲಾಗಿ ಮಾರ್ಬಲ್ / ಗ್ರಾನೈಟ್ ಎಂತಲು ಮತ್ತು ಕಾಲಂ ನಂ. 7ರಲ್ಲಿ ( ಮೂಲ ಗ್ರಾಮಪಂಚಾಯಿತಿ ವ್ಯಾಪ್ತಿಯ ) ಮಾರ್ಬಲ್ / ಗ್ರಾನೈಟ್ ಎಂಬುದಕ್ಕೆ ಬದಲಾಗಿ ಮೊಸಾಯಿಕ್ / ಸೆರಾಮಿಕ್ /

ವಿಟ್ರಿಫೈಡ್ ಟೈಲ್ಸ್ ಎಂತಲು ಕಾಲಂ ನಂ. 8ರಲ್ಲಿ ಮೊಸಾಯಿಕ್ / ಸೆರಾಮಿಕ್ / ವಿಟ್ರಿಫೈಡ್ ಟೈಲ್ಸ್ ಎಂಬುದಕ್ಕೆ ಬದಲಾಗಿ ಮಾರ್ಬಲ್ / ಗ್ರಾನೈಟ್ ಟೈಲ್ಸ್ ಎಂದು ಓದಿಕೊಳ್ಳತಕ್ಕದ್ದು.

**ಕಾರ್ಯದರ್ಶಿಗಳು**
ಕೇಂದ್ರ ಮೌಲ್ಯ ಮಾಪನ ಸಮಿತಿ,
ಬೆಂಗಳೂರು

# ವಿಶೇಷ ಪತ್ರಿಕೆ

**ಭಾಗ – III** | **ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೨೯, ೨೦೧೧ (ಆಶ್ವಯುಜ ೭, ಶಕ ವರ್ಷ ೧೯೩೩)** | **ನಂ. ೮೫೮**

## ನೋಂದಣಿ ಮತ್ತು ಮುದ್ರಾಂಕ ಇಲಾಖೆ

### ತಿದ್ದುಪಡಿ ಅಧಿಸೂಚನೆ

**ಸಂಖ್ಯೆ: CVC-19/10-11, ಬೆಂಗಳೂರು, ದಿನಾಂಕ: 28–09–2011**

ಅಧಿಸೂಚನೆ ಸಂಖ್ಯೆ: ಸಿವಿಸಿ–19/2010–11, ದಿನಾಂಕ: 21.09.2011 ಕರ್ನಾಟಕ ರಾಜ್ಯ ವಿಶೇಷ ಪತ್ರಿಕೆ ದಿನಾಂಕ: 21.09.2011 ರಲ್ಲಿ ಪ್ರಕಟಿಸಿರುವ ಜಯನಗರ ಜಿಲ್ಲಾ ನೋಂದಣಿ ಕಛೇರಿ ವ್ಯಾಪ್ತಿಯ ರಾಜರಾಜೇಶ್ವರಿ ಉಪ ನೋಂದಣಿ ಕಛೇರಿ ವ್ಯಾಪ್ತಿಯ ಕೈಬಿಟ್ಟುಹೋಗಿರುವ ಅಪಾರ್ಟ್‌ಮೆಂಟ್‌ಗಳ ದರಗಳು ಈ ಕೆಳಕಂಡಂತಿರುತ್ತವೆ.

| ಕ್ರಮ ಸಂಖ್ಯೆ | ರಾಜರಾಜೇಶ್ವರಿ ನಗರ ಉಪನೋಂದಣಿ ಕಛೇರಿಗೆ ಒಳಪಡುವ ಗ್ರಾಮಗಳು | ಬಿ.ಡಿ.ಎ ಮತ್ತು ಬಿಎಂಆರ್‌ಡಿಎ ಬಡಾವಣೆಗಳು, ಗೃ.ನಿ.ಸ ಸಂಘದ ಬಡಾವಣೆಗಳು (ಪತ್ರಿ ಚದರ ಅಡಿಗೆ) | | ಮಹಾನಗರಪಾಲಿಕೆ ಮತ್ತು ನಗರ ಸಭೆ ಸರಹದ್ದಿನ ನಿವೇಶನಗಳು, ಪರಿವರ್ತನೆ ನಿವೇಶಗಳು | | ಮೂಲ ಗ್ರಾಮಠಾಣ ನಿವೇಶನಗಳು | |
|---|---|---|---|---|---|---|---|
| | | ಮೊಸಾಯಿಕ್/ ಸೆರಾಮಿಕ್/ವಿಟ್ರಿಫೈಡ್ ಟೈಲ್ಸ್ | ಮಾರ್ಬಲ್/ ಗ್ರಾನೈಟ್ ಟೈಲ್ಸ್ | ಮೊಸಾಯಿಕ್/ ಸೆರಾಮಿಕ್/ವಿಟ್ರಿಫೈಡ್ ಟೈಲ್ಸ್ | ಮಾರ್ಬಲ್/ ಗ್ರಾನೈಟ್ ಟೈಲ್ಸ್ | ಮೊಸಾಯಿಕ್/ ಸೆರಾಮಿಕ್/ ವಿಟ್ರಿಫೈಡ್ ಟೈಲ್ಸ್ | ಮಾರ್ಬಲ್/ ಗ್ರಾನೈಟ್ ಟೈಲ್ಸ್ |
| **1** | **2** | **3** | **4** | **5** | **6** | **7** | **8** |
| 1 | ಅಗರ | 1290 | 1410 | ---- | ---- | 960 | 1090 |
| 2 | ಕೃಷ್ಣರಾಜಪುರ | 1250 | 1380 | ---- | ---- | 960 | 1090 |
| 3 | ಕೆಂಚೇನಹಳ್ಳಿ | 2130 | 2250 | 2000 | 2130 | ---- | ---- |
| a | ಹೆಚ್.ಬಿ.ಸಿ.ಎಸ್. ಐಡಿಯಲ್ ಹೋಮ್ | 2470 | 2590 | 2390 | 2510 | ---- | ---- |
| b | ಹೆಚ್.ಬಿ.ಸಿ.ಎಸ್. ಫಾರೆಸ್ಟ್ | 1400 | 1520 | 1290 | 1410 | ---- | ---- |
| 4 | ಕಣಿಮಿಣಿಕೆ | 1400 | 1520 | 1290 | 1410 | 990 | 1120 |
| 5 | ಕಂಭೀಪುರ | 1590 | 1720 | 1330 | 1460 | 1010 | 1140 |
| 6 | ಕೆಂಗೇರಿ ಗೊಲ್ಲಹಳ್ಳಿ | 1370 | 1490 | 1330 | 1460 | 1010 | 1140 |
| 7 | ಕುಂಬಳಗೋಡು ಗೊಲ್ಲಹಳ್ಳಿ | 1290 | 1410 | 1010 | 1140 | 970 | 1100 |
| 8 | ಗಾಣಕಲ್ಲು | 1630 | 1760 | 1330 | 1460 | 1010 | 1140 |
| 9 | ಗಂಗಸಂದ್ರ | 1370 | 1490 | 990 | 1120 | 960 | 1090 |
| 10 | ಗುಡಿಮಾವು | 1370 | 1490 | 990 | 1120 | 960 | 1090 |
| 11 | ಗೋಣಿಪುರ | 1370 | 1490 | 990 | 1120 | 960 | 1090 |
| 12 | ಗೋವಿಪಂತರಪಾಳ್ಯ | 1250 | 1380 | 1010 | 1140 | 950 | 1070 |
| 13 | ಗೋವಿಂದನಹಳ್ಳಿ | 1250 | 1380 | 1010 | 1140 | 950 | 1070 |
| 14 | ಹೆಚ್.ಗೊಲ್ಲಹಳ್ಳಿ | 1370 | 1490 | 1330 | 1460 | 960 | 1090 |
| 15 | ಚಿನ್ನಕುರ್ಚಿ | 1370 | 1490 | 1330 | 1460 | 960 | 1090 |

| ಕ್ರಮ ಸಂಖ್ಯೆ | ರಾಜರಾಜೇಶ್ವರಿ ನಗರ ಉಪನೋಂದಣಿ ಕಛೇರಿಗೆ ಒಳಪಡುವ ಗ್ರಾಮಗಳು | ಬಿ.ಡಿ.ಎ ಮತ್ತು ಬಿಎಂಆರ್‌ಡಿಎ ಬಡಾವಣೆಗಳು, ಗೃ.ನಿ.ಸ ಸಂಘದ ಬಡಾವಣೆಗಳು (ಪತ್ರಿ ಚದರ ಅಡಿಗೆ) | | ಮಹಾನಗರಪಾಲಿಕೆ ಮತ್ತು ನಗರ ಸಭೆ ಸರಹದ್ದಿನ ನಿವೇಶನಗಳು, ಪರಿವರ್ತನೆ ನಿವೇಶಗಳು | | ಮೂಲ ಗ್ರಾಮಠಾಣ ನಿವೇಶನಗಳು | |
|---|---|---|---|---|---|---|---|
| | | ಮೊಸಾಯಿಕ್/ ಸೆರಾಮಿಕ್/ವಿಟ್ರಿಫೈಡ್ ಟೈಲ್ಸ್ | ಮಾರ್ಬಲ್/ ಗ್ರಾನೈಟ್ ಟೈಲ್ಸ್ | ಮೊಸಾಯಿಕ್/ ಸೆರಾಮಿಕ್/ವಿಟ್ರಿಫೈಡ್ ಟೈಲ್ಸ್ | ಮಾರ್ಬಲ್/ ಗ್ರಾನೈಟ್ ಟೈಲ್ಸ್ | ಮೊಸಾಯಿಕ್/ ಸೆರಾಮಿಕ್/ ವಿಟ್ರಿಫೈಡ್ ಟೈಲ್ಸ್ | ಮಾರ್ಬಲ್/ ಗ್ರಾನೈಟ್ ಟೈಲ್ಸ್ |
| 1 | 2 | 3 | 4 | 5 | 6 | 7 | 8 |
| 16 | ತಗಚಗುಪ್ಪೆ | 1370 | 1490 | 1330 | 1460 | 960 | 1090 |
| 17 | ತಿಪ್ಪೂರು | 1330 | 1460 | 990 | 1120 | 950 | 1070 |
| 18 | ದೇವಗೆರೆ | 1290 | 1410 | 1010 | 1140 | 960 | 1090 |
| 19 | ದೊಡ್ಡಬೆಲೆ | 1330 | 1460 | 1250 | 1380 | 990 | 1120 |
| 20 | ನೆಲಗೊಂಡನಹಳ್ಳಿ | 1250 | 1380 | 970 | 1100 | 930 | 1050 |
| 21 | ಪಟ್ಟಣಗೆರೆ | 2130 | 2250 | 1940 | 2070 | ----- | ----- |
| 22 | ರೆಂಕೋ ಬಿ.ಹೆಚ್.ಇ.ಎಲ್. ಬಡವಾಣೆ | 1970 | 2100 | ----- | ----- | ----- | ----- |
| 23 | ಪಂತರಪಾಳ್ಯ | 1670 | 1790 | 1650 | 1780 | ----- | ----- |
| 24 | ಬಡಮನವರ್ತೆಕಾವಲ್ | 1330 | 1460 | 1280 | 1400 | 970 | 1100 |
| 25 | ಮೈಲಸಂದ್ರ | 2130 | 2250 | 1940 | 2070 | ----- | ----- |
| 26 | ರಾಚನಮಡು | 1250 | 1380 | 1010 | 1140 | 950 | 1070 |
| 27 | ಲಿಂಗಧೀರನಹಳ್ಳಿ | 1330 | 1460 | 1290 | 1410 | 970 | 1100 |
| 28 | ವರಹಸಂದ್ರ | 1010 | 1140 | 970 | 1100 | 950 | 1070 |
| 29 | ವೆಂಕಟಾಪುರ | 1250 | 1380 | 1010 | 1140 | 950 | 1070 |
| 30 | ವಸಂತನಹಳ್ಳಿ | 1250 | 1380 | 970 | 110 | 930 | 1050 |
| 31 | ಸೋಮಪುರ | 1290 | 1410 | 1290 | 1410 | 990 | 1120 |
| 32 | ಸೀಗೇಹಳ್ಳಿ | 1250 | 1380 | 970 | 1100 | 930 | 1050 |
| 33 | ಹಂಪಾಪುರ | 1290 | 1410 | 1250 | 1380 | 1010 | 1140 |
| 34 | ಹೆಮ್ಮಿಗೆಪುರ | 1720 | 1840 | 1290 | 1410 | 1010 | 1140 |
| 35 | ಹಲಗೇವಡೇರಹಳ್ಳಿ | 2470 | 2590 | 1940 | 2070 | ----- | ----- |
| a | ಬಿ.ಇ.ಎಂ.ಎಲ್. 3ನೇ ಹಂತ ನೆಹರು ರಸ್ತೆ (60 ಅಡಿ ರಸ್ತೆ) | ----- | ----- | 3390 | 3520 | ----- | ----- |
| b | ಬಿ.ಇ.ಎಂ.ಎಲ್ 3ನೇ ಹಂತ 6ನೇ ಮುಖ್ಯರಸ್ತೆ (80 ಅಡಿ ರಸ್ತೆ) | ----- | ----- | 3030 | 3160 | ----- | ----- |
| c | ಬಿ.ಇ.ಎಂ.ಎಲ್. 3ನೇ ಹಂತ | | | 2470 | 2590 | ----- | ----- |
| d | ಬಿ.ಇ.ಎಂ.ಎಲ್. 3ನೇ ಹಂತ ಚಂದ್ರಶೇಖರನ್ ರಸ್ತೆ | ----- | ----- | 2840 | 2960 | ----- | ----- |
| e | ಬಿ.ಇ.ಎಂ.ಎಲ್. 4ನೇ ಹಂತ ನೆಹರು ರಸ್ತೆ (60 ಅಡಿ ರಸ್ತೆ) | | | 3180 | 3310 | ----- | ----- |
| f | ಬಿ.ಇ.ಎಂ.ಎಲ್. 4ನೇ ಹಂತ 6ನೇ ಮುಖ್ಯರಸ್ತೆ (80 ಅಡಿ ರಸ್ತೆ) | ----- | ----- | 3030 | 3160 | ----- | ----- |
| g | ಬಿ.ಇ.ಎಂ.ಎಲ್. 4ನೇ ಹಂತ | ----- | ----- | 2390 | 2510 | ----- | ----- |
| h | ಬಿ.ಇ.ಎಂ.ಎಲ್. 5ನೇ ಹಂತ ನೆಹರು ರಸ್ತೆ (60 ಅಡಿ ರಸ್ತೆ) | ----- | ----- | 2840 | 2960 | ----- | ----- |
| i | ಬಿ.ಇ.ಎಂ.ಎಲ್ 5ನೇ ಹಂತ 6ನೇ ಮುಖ್ಯರಸ್ತೆ (80 ಅಡಿ ರಸ್ತೆ) | ----- | ----- | 2470 | 2590 | ----- | ----- |
| j | ಬಿ.ಇ.ಎಂ.ಎಲ್. 5ನೇ ಹಂತ | ----- | ----- | 2130 | 2250 | ----- | ----- |

| ಕ್ರಮ ಸಂಖ್ಯೆ | ರಾಜರಾಜೇಶ್ವರಿ ನಗರ ಉಪನೋಂದಣಿ ಕಛೇರಿಗೆ ಒಳಪಡುವ ಗ್ರಾಮಗಳು | ಬಿ.ಡಿ.ಎ ಮತ್ತು ಬಿಎಂಆರ್‌ಡಿಎ ಬಡಾವಣೆಗಳು, ಗೃ.ನಿ.ಸ ಸಂಘದ ಬಡಾವಣೆಗಳು (ಪ್ರತಿ ಚದರ ಅಡಿಗೆ) | | ಮಹಾನಗರಪಾಲಿಕೆ ಮತ್ತು ನಗರ ಸಭೆ ಸರಹದ್ದಿನ ನಿವೇಶನಗಳು, ಪರಿವರ್ತನೆ ನಿವೇಶಗಳು | | ಮೂಲ ಗ್ರಾಮಠಾಣ ನಿವೇಶನಗಳು | |
|---|---|---|---|---|---|---|---|
| | | ಮೊಸಾಯಿಕ್/ ಸೆರಾಮಿಕ್/ವಿಟ್ರಿಫೈಡ್ ಟೈಲ್ಸ್ | ಮಾರ್ಬಲ್/ ಗ್ರಾನೈಟ್ ಟೈಲ್ಸ್ | ಮೊಸಾಯಿಕ್/ ಸೆರಾಮಿಕ್/ವಿಟ್ರಿಫೈಡ್ ಟೈಲ್ಸ್ | ಮಾರ್ಬಲ್/ ಗ್ರಾನೈಟ್ ಟೈಲ್ಸ್ | ಮೊಸಾಯಿಕ್/ ಸೆರಾಮಿಕ್/ ವಿಟ್ರಿಫೈಡ್ ಟೈಲ್ಸ್ | ಮಾರ್ಬಲ್/ ಗ್ರಾನೈಟ್ ಟೈಲ್ಸ್ |
| 1 | 2 | 3 | 4 | 5 | 6 | 7 | 8 |
| 36 | ಕಾರುಬೆಲೆ | 1250 | 1380 | 1010 | 1140 | 950 | 1070 |
| 37 | ನಾಗೇಗೌಡನಪಾಳ್ಯ | 1250 | 1380 | 1010 | 1140 | 950 | 1070 |

ಕೈಬಿಟ್ಟುಹೋಗಿರುವ ಗ್ರಾಮಗಳ ಅಪಾರ್ಟ್‌ಮೆಂಟ್‌ಗಳಿಗೆ ಮೇಲ್ಕಂಡಂತೆ ನಿಗಧಿಪಡಿಸಿರುವ ದರಗಳನ್ನು ಅಳವಡಿಸಿಕೊಳ್ಳತಕ್ಕದ್ದು.

**ಕಾರ್ಯದರ್ಶಿಗಳು**
ಕೇಂದ್ರ ಮೌಲ್ಯ ಮಾಪನ ಸಮಿತಿ,
ಬೆಂಗಳೂರು

# ವಿಶೇಷ ಪತ್ರಿಕೆ

| ಭಾಗ – IV | ಬೆಂಗಳೂರು, ಶುಕ್ರವಾರ, ಸೆಪ್ಟೆಂಬರ್ ೩೦, ೨೦೧೧ (ಆಶ್ವಯುಜ ೮, ಶಕ ವರ್ಷ ೧೯೩೩) | ನಂ. ೮೬೧ |
|---|---|---|

## ಮುಖ್ಯ ಚುನಾವಣಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಕಚೇರಿ, ಸಿ.ಆ.ಸು.ಇ. (ಚುನಾವಣೆಗಳು),

**ಡಾ॥ ಬಿ.ಆರ್. ಅಂಬೇಡ್ಕರ್ ವೀಧಿ, ಬೆಂಗಳೂರು–560 001.**

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 09 ಚುವಿಸ 2011, ಬೆಂಗಳೂರು, ದಿನಾಂಕ: 29ನೇ ಸೆಪ್ಟೆಂಬರ್, 2011**

1951ರ ಪ್ರಜಾ ಪ್ರಾತಿನಿಧ್ಯ ಕಾಯ್ದೆ (1951ರ 43ನೇ ಕೇಂದ್ರ ಅಧಿನಿಯಮ) ಸೆಕ್ಷನ್ 67ರ ಉಪಬಂಧಗಳ ಅನುಸಾರ ಸಾರ್ವಜನಿಕ ಮಾಹಿತಿಗಾಗಿ ಈ ಮುಂದಿನ ಘೋಷಣೆಯನ್ನು ಪ್ರಕಟಿಸಲಾಗಿದೆ.

**ನಮೂನೆ – 21ಡಿ**

(ನಿಯಮ 64ನ್ನು ನೋಡಿ)

1951ರ ಪ್ರಜಾ ಪ್ರಾತಿನಿಧ್ಯ ಕಾಯ್ದೆ ಸೆಕ್ಷನ್ 66ರಡಿ ಚುನಾವಣಾ ಫಲಿತಾಂಶ ಘೋಷಣೆ

**64–ಕೊಪ್ಪಳ ವಿಧಾನಸಭಾ ಕ್ಷೇತ್ರದಿಂದ ಕರ್ನಾಟಕ ವಿಧಾನಸಭೆಗೆ ಉಪ ಚುನಾವಣೆ, 2011**

1961ರ ಚುನಾವಣೆಗಳನ್ನು ನಡೆಸುವ ನಿಯಮಗಳ, ನಿಯಮ 64ರನ್ವಯ ಹಾಗೂ 1951ರ ಪ್ರಜಾ ಪ್ರಾತಿನಿಧ್ಯ ಕಾಯ್ದೆ ಸೆಕ್ಷನ್ 66ರಲ್ಲಿ ಒಳಗೊಂಡ ಉಪಬಂಧಗಳ ಅನುಸಾರವಾಗಿ **ಭಾರತೀಯ ಜನತಾ ಪಕ್ಷ**ದಿಂದ ಪುರಸ್ಕರಿಸಲಾದ –

ಕರಡಿ ಸಂಗಣ್ಣ ಅಮರಪ್ಪ,
ಲಕ್ಷ್ಮಿ ನಿವಾಸ,
ಪ್ರಗತಿ ನಗರ, ಕಿನ್ನಾಳ ರಸ್ತೆ, ಕೊಪ್ಪಳ.

ಇವರು ಸದರಿ ಸದನದಲ್ಲಿ ಶ್ರೀ ಕರಡಿ ಸಂಗಣ್ಣ ಅಮರಪ್ಪ ಇವರ ರಾಜೀನಾಮೆಯಿಂದ ತೆರವಾದ ಸ್ಥಾನಕ್ಕೆ ವಿಧ್ಯುಕ್ತವಾಗಿ ಚುನಾಯಿತರಾಗಿರುವರೆಂಬುದಾಗಿ ನಾನು ಘೋಷಿಸುತ್ತೇನೆ.

ಸ್ಥಳ: ಕೊಪ್ಪಳ
ದಿನಾಂಕ: 29–09–2011

**ಎಂ. ಶರಣಬಸಪ್ಪ**
ಚುನಾವಣಾಧಿಕಾರಿ,
64–ಕೊಪ್ಪಳ ವಿಧಾನಸಭಾ ಕ್ಷೇತ್ರ
ಮತ್ತು ಉಪವಿಭಾಗಾಧಿಕಾರಿಗಳು, ಕೊಪ್ಪಳ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ. ಶಾಮಯ್ಯ**
ಜಂಟಿ ಮುಖ್ಯ ಚುನಾವಣಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,
ಸಿ.ಆ.ಸು.ಇ. (ಚುನಾವಣೆಗಳು).

## Office of the Chief Electoral Officer & Ex-officio Additional Chief Secretary to Govt. D.P.A.R. (Elections),

**Dr. B.R. Ambedkar Veedhi, Bangalore-560 001.**

**NOTIFICATION**

**No.DPAR 09 CHUVISA 2011, dated: 29th September, 2011**

In pursuance of the provisions of Section 67 of the Representation of the People Act, 1951 (Central Act, 43 of 1951) the following declaration of the result of election is published for general information.

### FORM 21D

(See Rule 64)

Declaration of the result of Election under Section 66 of the Representation of the People Act, 1951

Bye-election to the Legislative Assembly of Karnataka State from **64-Koppal Assembly Constituency**.

In pursuance of the provisions contained in Section 66 of the Representation of the People Act, 1951, read with rule 64 of the Conduct of Elections Rules, 1961, I declare that-

Karadi Sanganna Amarappa
Lakshmi Nivas, Pragathi Nagar,
Kinnal Road,
Koppal.

sponsored by **Bharatiya Janata Party** has been duly elected to fill the vacancy caused in that House by the resignation of Sri Karadi Sanganna Amarappa, having been declared vacant.

Place: Koppal
Date: 29-09-2011

**M. SHARANABASAPPA**
Returning Officer,
64-Koppal Assembly Constituency and
Assistant Commissioner, Koppal.

By Order and in the name of the Governor of Karnataka

**T. SHAMAIAH**
Joint Chief Electoral Officer &
Ex-Officio Joint Secretary to Govt.,
D.P.A.R. (Elections).

# ವಿಶೇಷ ಪತ್ರಿಕೆ



| ಭಾಗ – IV-A | ಬೆಂಗಳೂರು, ಶನಿವಾರ, ಅಕ್ಟೋಬರ್ ೧, ೨೦೧೧ (ಆಶ್ವಯುಜ ೯, ಶಕ ವರ್ಷ ೧೯೩೩) | ನಂ. ೮೬೨ |
|---|---|---|



## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 2 ಎಸ್ಎಸ್ಆರ್ 2011, ಬೆಂಗಳೂರು, ದಿನಾಂಕ: 30.09.2011**

ಕರ್ನಾಟಕ ಸಿವಿಲ್ ಸೇವೆಗಳು (ಸೇವೆಗಳು ಮತ್ತು ಕನ್ನಡ ಭಾಷಾ ಪರೀಕ್ಷೆಗಳು) ನಿಯಮಗಳು, 1974ಕ್ಕೆ ಮತ್ತಷ್ಟು ತಿದ್ದುಪಡಿ ಮಾಡಲು ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (1990ರ ಅಧಿನಿಯಮ ಸಂಖ್ಯೆ:14)ರ 8ನೇ ಪ್ರಕರಣದೊಡನೆ ಓದಿಕೊಂಡ 3ನೇ ಪ್ರಕರಣದ (1)ನೇ ಉಪ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡ ನಿಯಮಗಳ ಕರಡನ್ನು ಸದರಿ ಅಧಿನಿಯಮದ 3ನೇ ಪ್ರಕರಣದ (2)ನೇ ಉಪ ಪ್ರಕರಣ (ಎ) ಖಂಡದ ಮೂಲಕ ಅಗತ್ಯಪಡಿಸಲಾದಂತೆ, ಅದರಿಂದ ಬಾಧಿತರಾಗಬಹುದಾದ ವ್ಯಕ್ತಿಗಳ ಮಾಹಿತಿಗಾಗಿ ಪ್ರಕಟಿಸಲಾಗಿದೆ ಮತ್ತು ಸದರಿ ಕರಡನ್ನು ಅಧಿಕೃತ ರಾಜ್ಯಪತ್ರದಲ್ಲಿ ಅದು ಪ್ರಕಟವಾದ ದಿನಾಂಕದಿಂದ 15 ದಿನಗಳ ತರುವಾಯ ಪರಿಗಣನೆಗೆ ತೆಗೆದುಕೊಳ್ಳಲಾಗುವುದೆಂದು ಈ ಮೂಲಕ ಸೂಚನೆ ನೀಡಲಾಗಿದೆ.

ಮೇಲೆ ನಿರ್ದಿಷ್ಟಪಡಿಸಿದ ಅವಧಿಯು ಮುಕ್ತಾಯವಾಗುವುದಕ್ಕೆ ಮೊದಲು ಸದರಿ ಕರಡು ನಿಯಮಗಳಿಗೆ ಸಂಬಂಧಿಸಿದಂತೆ, ಯಾವುದೇ ವ್ಯಕ್ತಿಯಿಂದ ರಾಜ್ಯ ಸರ್ಕಾರವು ಸ್ವೀಕರಿಸಬಹುದಾದ ಯಾವುದೇ ಆಕ್ಷೇಪಣೆ ಅಥವಾ ಸಲಹೆಯನ್ನು ರಾಜ್ಯ ಸರ್ಕಾರ ಪರಿಗಣಿಸುವುದು. ಆಕ್ಷೇಪಣೆ ಮತ್ತು ಸಲಹೆಗಳನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, ವಿಧಾನ ಸೌಧ, ಬೆಂಗಳೂರು–560 001 ಇವರಿಗೆ ಕಳುಹಿಸಬಹುದು.

**ಕರಡು ನಿಯಮಗಳು**

1. **ಶಿರೋನಾಮೆ ಮತ್ತು ಪ್ರಾರಂಭ.– (1)** ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವೆಗಳು (ಸೇವೆಗಳು ಮತ್ತು ಕನ್ನಡ ಭಾಷಾ ಪರೀಕ್ಷೆಗಳು) (. . . ನೇ ತಿದ್ದುಪಡಿ) ನಿಯಮಗಳು, 2011 ಎಂದು ಕರೆಯತಕ್ಕದ್ದು.

(2) ಇದು ರಾಜ್ಯಪತ್ರದಲ್ಲಿ ಪ್ರಕಟಣೆಗೊಂಡ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

2. **ಷೆಡ್ಯೂಲ್–II ಕ್ಕೆ ತಿದ್ದುಪಡಿ.–** ಕರ್ನಾಟಕ ಸಿವಿಲ್ ಸೇವೆಗಳು (ಸೇವೆಗಳು ಮತ್ತು ಕನ್ನಡ ಭಾಷಾ ಪರೀಕ್ಷೆಗಳು) ನಿಯಮಗಳು, 1974ರ ಷೆಡ್ಯೂಲ್–II ಕ್ರಮ ಸಂಖ್ಯೆ: 31ರಲ್ಲಿರುವ "ಪೊಲೀಸ್ ಇಲಾಖೆ" ಶೀರ್ಷಿಕೆಯಡಿ, ಕಲಂ–3ರಲ್ಲಿನ ನಮೂದುಗಳಲ್ಲಿ 'ಸಹಾಯಕ ಕಮಾಂಡಂಟ್' ಹುದ್ದೆಗೆ ಸಂಬಂಧಿಸಿದಂತೆ, ಕ್ರಮ ಸಂಖ್ಯೆ:2ರಲ್ಲಿರುವ "ಸಹಾಯಕ ಕಮಾಂಡೆಂಟ್ ಹುದ್ದೆಗೆ ನಿಗದಿಪಡಿಸಿರುವ ತರಬೇತಿ ಪಡೆದಿರದಿದ್ದಲ್ಲಿ" ಪದಗಳಿಗೆ ಬದಲಾಗಿ "ಪೊಲೀಸ್ ತರಬೇತಿ ಶಾಲೆ/ಕರ್ನಾಟಕ ಪೊಲೀಸ್ ಅಕಾಡೆಮಿಯಲ್ಲಿ ಸಹಾಯಕ ಕಮಾಂಡೆಂಟ್ ಅಥವಾ ಪರೀಕ್ಷಾರ್ಥ ಸಬ್ ಇನ್ಸ್‌ಪೆಕ್ಟರ್ ಹುದ್ದೆಗೆ ನಿಗದಿಪಡಿಸಿರುವ ತರಬೇತಿ ಪಡೆದಿರದಿದ್ದಲ್ಲಿ" ಎಂಬ ಪದಗಳನ್ನು ಪ್ರತಿಸ್ಥಾಪಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ದೇವರಾಜು,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವಾ ನಿಯಮಗಳು–1)

## PERSONNEL & ADMINISTRATIVE REFORMS SECRETARIAT

### NOTIFICATION

### No. DPAR 2 SSR 2011, Bangalore, Dated: 30-09-2011

The draft of the following rules further to amend the Karnataka Civil Services (Service and Kannada Language Examinations) Rules, 1974, which the Government of Karnataka proposes to make in exercise of the powers conferred by sub-section (1) of section 3 read with section 8 of the Karnataka State Civil Services Act, 1978 (Karnataka Act 14 of 1990) is hereby published as required by clause (a) of sub-section (2) of section 3 of the said Act, for the information of all persons likely to be affected thereby and notice is hereby given that the said draft will be taken into consideration after fifteen days from the date of its publication in the Official Gazette.

Any objection or suggestion which may be received by the State Government from any person with respect to the said draft before the expiry of the period specified above will be considered by the State Government. Objections and suggestions may be addressed to the Principal Secretary to Government, Department of Personnel and Administrative Reforms, Vidhana Soudha, Bangalore – 560 001.

**DRAFT RULES**

**1. Title and commencement**.- (1) These rules may be called the Karnataka Civil Services (Service and Kannada Language Examinations) (. . . . . Amendment) Rules, 2011.

(2) They shall come into force from the date of their publication in the Official Gazette.

**2. Amendment of Schedule- II:-** In Schedule- II to the Karnataka Civil Services (Service and Kannada Language Examinations) Rules, 1974, in the Table under the heading 'POLICE DEPARTMENT' at serial number 31, in the entries relating to the category of post of "Assistant Commandant", in column-3 in the entries relating to Serial No.(2) for the words "if he has not undergone training prescribed for Assistant Commandant" the words "if he has not undergone

training in Police Training School/Karnataka Police Academy prescribed for Assistant Commandant or Sub-Inspector trainees” shall be substituted.

By Order and in the name of the Governor of Karnataka,

**DEVARAJU**
Under Secretary to Government,
Department of Personnel & Administrative Reforms
(Service Rules-1)

# ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಮಂಗಳವಾರ, ಅಕ್ಟೋಬರ್ ೪, ೨೦೧೧ (ಆಶ್ವಯುಜ ೧೨, ಶಕ ವರ್ಷ ೧೯೩೩) | ನಂ. ೮೬೨ |
|---|---|---|

## HOME SECRETARIAT

**NOTIFICATION**

**No. HD 243 PCC 2010, Bangalore, Dated: 03-10-2011**

In exercise of the powers conferred by sub-section (1) of section 13 of the Immoral Traffic (Prevention) Act, 1956 (Central Act 104 of 1956) read with section 21 of the General Clauses Act, 1897 (Central Act X of 1897) and in supersession of all the notifications issued earlier in this behalf, the Government of Karnataka here by appoints the officers mentioned in Column (2) of the schedule below as Special Police Officer in respect of the areas specified in the corresponding entries within the jurisdiction mentioned in column (3) for the purpose of the said Act.

**SCHEDULE**

| Sl. No. | Officers | Area |
|---|---|---|
| 1. | Police Commissioners of Mysore/ Mangalore/ Hubli-Dharwad Police Commissionerate. | Within their respective jurisdiction. |
| 2. | Deputy Commissioners of Police (Law & Order) of Mysore/ Mangalore/ Hubli-Dharwad Police Commissionerate. | Within their respective jurisdiction. |
| 3. | Deputy Commissioners of Police (Crime & Traffic) of Mysore/ Mangalore/ Hubli-Dharwad Police Commissionerate. | Within their respective jurisdiction. |
| 4. | Assistant Commissioners of Police of Mysore/ Mangalore/ Hubli-Dharwad Police Commissionerate. | Within their respective jurisdiction. |
| 5. | Police Inspectors Incharge of Police Stations in Mysore/ Mangalore/ Hubli-Dharwad city. | Within their respective jurisdiction. |

By Order and in the name of the Governor of Karnataka,

**T.M. VASUDEVA RAO**
Under Secretary to Government
Home Department (Crimes)

# ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಬುಧವಾರ, ಅಕ್ಟೋಬರ್ ೧೨, ೨೦೧೧ (ಆಶ್ವಯುಜ ೨೦, ಶಕ ವರ್ಷ ೧೯೩೩) | ನಂ. ೮೬೮ |
|---|---|---|

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 47 ಸೇಇವಿ 2011, ಬೆಂಗಳೂರು, ದಿನಾಂಕ: 12.10.2011**

ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 7ರ ಉಪನಿಯಮ (1)ರ ಪರಂತುಕದನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಕರ್ನಾಟಕ ಸರ್ಕಾರ ಸಚಿವಾಲಯದ ಸಮೂಹ–ಬಿ ವೃಂದದ

ಶಾಖಾಧಿಕಾರಿ ಹುದ್ದೆಗಳ ಮೊದಲ ನೇಮಕಾತಿಗೆ ಸಂಬಂಧಿಸಿದಂತೆ ಸರ್ಕಾರದ ಮುಖ್ಯ ಕಾರ್ಯದರ್ಶಿಯವರನ್ನು ನೇಮಕಾತಿ ಪ್ರಾಧಿಕಾರವೆಂದು ನಿರ್ದಿಷ್ಟಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಕೆ. ಲಕ್ಷ್ಮೀನಾರಾಯಣ ರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ,
(ಸೇವಾ ನಿಯಮಗಳು–2)

## PERSONNEL AND ADMINISTRATIVE REFORMS SECRETARIAT

### NOTIFICATION

### No. DPAR 47 SDE 2011, Bangalore, Dated: 12-10-2011

In exercise of the powers conferred by the proviso to sub-rule (1) of rule 7 of the Karnataka Civil Services (Classification, Control and Appeal) Rules, 1957, the Government of Karnataka, hereby specifies that the Chief Secretary to Government shall be the Appointing Authority in respect of first appointments to Group-B posts of Section Officers of the Karnataka Government Secretariat.

By Order and in the name of the Governor of Karnataka,

**H.K. LAKSHMINARAYANA RAO**
Under Secretary to Government I/c,
Department of Personnel & Administrative Reforms
(Service Rules-2)

# ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಗುರುವಾರ, ಅಕ್ಟೋಬರ್ ೧೩, ೨೦೧೧ (ಆಶ್ವಯುಜ ೨೧, ಶಕ ವರ್ಷ ೧೯೩೩) | ನಂ. ೮೬೯ |
|---|---|---|

## ಕರ್ನಾಟಕ ವಿಧಾನಸಭೆ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ: ವಿಸಸ/ಶಾರಶಾ/ಸರಾ/416/2011, ಬೆಂಗಳೂರು, ದಿನಾಂಕ: 13ನೇ ಅಕ್ಟೋಬರ್, 2011

ಬಳ್ಳಾರಿ (ಮೀಸಲು) ವಿಧಾನಸಭಾ ಕ್ಷೇತ್ರ ಸಂಖ್ಯೆ: 93 ರಿಂದ ಹದಿಮೂರನೇ ವಿಧಾನಸಭೆಗೆ ಚುನಾಯಿತರಾಗಿದ್ದ **ಶ್ರೀ ಬಿ. ಶ್ರೀರಾಮುಲು** ಅವರು ವಿಧಾನ ಸಭೆಯ ಸದಸ್ಯತ್ವಕ್ಕೆ ರಾಜೀನಾಮೆ ನೀಡಿದ್ದು, ಸದರಿ ರಾಜೀನಾಮೆಯನ್ನು ವಿಧಾನ ಸಭೆಯ ಮಾನ್ಯ ಸಭಾಧ್ಯಕ್ಷರು ದಿನಾಂಕ: 13ನೇ ಅಕ್ಟೋಬರ್, 2011 ರಂದು ಅಂಗೀಕರಿಸಿರುತ್ತಾರೆ. ಆದುದರಿಂದ ವಿಧಾನ ಸಭೆಯಲ್ಲಿ ಒಂದು ಸ್ಥಾನವು ತೆರವಾಗಿರುತ್ತದೆ.

**ಎಸ್.ಬಿ.ಪಾಟೀಲ್**
ಕಾರ್ಯದರ್ಶಿ
ಕರ್ನಾಟಕ ವಿಧಾನಸಭೆ

## KARNATAKA LEGISLATIVE ASSEMBLY SECRETARIAT

### NOTIFICATION

### No. LAS/LEG/MR/416/2011, Bangalore, Dated: 13th October, 2011

**Shri B. Sriramulu,** Member, Legislative Assembly elected to the Thirteenth Assembly from Bellary (ST) Constituency, No. 93 has tendered his resignation to the Membership of Legislative Assembly and the same has been accepted by the Hon'ble Speaker, Legislative Assembly on 13th October, 2011. Hence, one seat of Legislative Assembly has fallen vacant.

**S.B.PATIL**
Secretary
Karnataka Legislative Assembly

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಗುರುವಾರ, ಅಕ್ಟೋಬರ್ ೧೩, ೨೦೧೧ (ಆಶ್ವಯುಜ ೨೧, ಶಕ ವರ್ಷ ೧೯೩೩) | ನಂ. ೮೭೦ |
|---|---|---|

## ಕಾರ್ಮಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಾಇ 64 ಎಲ್‌ಎಂಡಬ್ಲ್ಯೂ 2010, ಬೆಂಗಳೂರು, ದಿನಾಂಕ: 12–10–2011**

ಕರ್ನಾಟಕ ರಾಜ್ಯಾದ್ಯಂತ **"ಮರಗೆಲಸ ಅಥವಾ ಮರ ಕೊಯ್ಯುವ"** ಉದ್ದಿಮೆಯಲ್ಲಿನ ಯಾವುದೇ ಕೆಲಸದಲ್ಲಿ ತೊಡಗಿರುವ ಕಾರ್ಮಿಕರಿಗೆ ಕನಿಷ್ಠ ವೇತನವನ್ನು ಪರಿಷ್ಕರಿಸಲು ಸರ್ಕಾರದ ಕರಡು ಪ್ರಸ್ತಾವನೆಯನ್ನು ದಿನಾಂಕ: 10.03.2011ರ ಕರ್ನಾಟಕ ರಾಜ್ಯ ಪತ್ರದ ಭಾಗ–4[ಎ]ರಲ್ಲಿ ಪ್ರಕಟಿಸಿ, ಕನಿಷ್ಠ ವೇತನ ಕಾಯ್ದೆ 1948 [ಕೇಂದ್ರಾಧಿನಿಯಮ ಸಂಖ್ಯೆ: 11] ರ ಸೆಕ್ಷನ್ 5(1)(ಬಿ) ಪ್ರಕಾರ ಇದರಿಂದ ಭಾಧಿತರಾಗುವ/ ಸಂಬಂಧವಿರುವ ವ್ಯಕ್ತಿಗಳ ಗಮನಕ್ಕೆ ತರಲಾಗಿದ್ದು, ಅವರಿಂದ ಸಲಹೆ/ಆಕ್ಷೇಪಣೆಗಳನ್ನು ಸ್ವೀಕರಿಸಲು 2 ತಿಂಗಳ ಕಾಲಾವಧಿಯನ್ನು ನೀಡಲಾಗಿತ್ತು. ಈ ಅವಧಿಯಲ್ಲಿ ಯಾವುದೇ ಸಲಹೆ/ಆಕ್ಷೇಪಣೆಗಳು ಸರ್ಕಾರದಲ್ಲಿ ಸ್ವೀಕೃತವಾಗಿರುವುದಿಲ್ಲ. ಕರಡು ಪ್ರಸ್ತಾವನೆಯನ್ನು ರಾಜ್ಯ ಕನಿಷ್ಠ ವೇತನ ಸಲಹಾ ಮಂಡಳಿಯ ಮುಂದೆ ಮಂಡಿಸಲಾಗಿತ್ತು. ಸರ್ಕಾರದ ಪ್ರಸ್ತಾವನೆಯನ್ನು ಸುಧೀರ್ಘವಾಗಿ ಸಮಾಲೋಚಿಸಿ ಅಂತಿಮ ಅಧಿಸೂಚನೆಯನ್ನು ಹೊರಡಿಸಲು ಮಂಡಳಿಯು ಸರ್ಕಾರಕ್ಕೆ ತನ್ನ ಶಿಫಾರಸ್ಸನ್ನು ನೀಡಿರುತ್ತದೆ.

ಕರ್ನಾಟಕ ರಾಜ್ಯ ಕನಿಷ್ಠ ವೇತನ ಸಲಹಾ ಮಂಡಳಿಯ ಶಿಫಾರಸ್ಸನ್ನು ಪರಿಗಣನೆಗೆ ತೆಗೆದುಕೊಂಡು, ಕನಿಷ್ಠ ವೇತನ ಕಾಯ್ದೆ 1948 [ಕೇಂದ್ರಾಧಿನಿಯಮ ಸಂಖ್ಯೆ: 11] ರ ಸೆಕ್ಷನ್ 3(1)(ಬಿ) ಹಾಗೂ 5(1)(ಬಿ) ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮತ್ತು ಈ ಹಿಂದಿನ ಎಲ್ಲಾ ಅಧಿಸೂಚನೆಗಳನ್ನು ರದ್ದುಪಡಿಸಿ, ಕರ್ನಾಟಕ ರಾಜ್ಯಾದ್ಯಂತ ಯಾವುದೇ **"ಮರಗೆಲಸ ಅಥವಾ ಮರ ಕೊಯ್ಯುವ"** ಉದ್ದಿಮೆಯ ಯಾವುದೇ ಕೆಲಸದಲ್ಲಿ ತೊಡಗಿರುವ ಕಾರ್ಮಿಕ ವರ್ಗದವರಿಗೆ ದಿನಾಂಕ: 1–4–2011 ರಿಂದ ಅನ್ವಯವಾಗುವಂತೆ ಕನಿಷ್ಠ ವೇತನವನ್ನು ಈ ಅಧಿಸೂಚನೆಯ ಅನುಸೂಚಿಯಲ್ಲಿ ಇರುವಂತೆ ಪರಿಷ್ಕರಿಸಲಾಗಿದೆ.

**ಅನುಸೂಚಿ**

| ಕ್ರ. ಸಂ. | ಕೆಲಸದ ವರ್ಗಗಳು | ಕನಿಷ್ಠ ವೇತನ ದರಗಳು [ಪ್ರತಿದಿನಕ್ಕೆ] | |
|---|---|---|---|
| | | ವಲಯ–1 | ವಲಯ–2 |
| **1** | **ಮರಗೆಲಸ ಕೈಗಾರಿಕೆ** | | |
| | **ಅ. ಕುಶಲಿಗಳಲ್ಲದ ಕಾರ್ಮಿಕರು ಮತ್ತು ಸಹಾಯಕರು** | | |
| 1 | ಅಭ್ಯಾಸಿ (ಅಪ್ರೆಂಟೀಸ್)ಗಳು | 148–00 | 146–10 |
| 2 | ಕೈ ದುಡಿಮೆಗಾರರು | | |
| | **ಆ. ಅರೆ ಕುಶಲ ಕಾರ್ಮಿಕರು** | | |
| 1 | ಸಹಾಯಕ ಬಡಗಿಗಳು | 152–00 | 149–88 |
| 2 | ಪ್ಯಾಕರ್‌ಗಳು | | |
| 3 | ಸಹಾಯಕ ಹೊಳಪುಗಾರರು | | |
| 4 | ಮರದ ಚೌಕಟ್ಟುಗಳನ್ನು ಕಟ್ಟುವವರು | | |
| | **ಇ. ಕುಶಲ ಕಾರ್ಮಿಕರು** | | |
| 1 | ಪೀಠೋಪಕರಣ ಮತ್ತು ಕಟ್ಟಡಗಳಲ್ಲಿ ಮರಗೆಲಸ ಮಾಡುವ ಬಡಗಿಗಳು | 156–00 | 153–69 |
| 2 | ಹೊಳಪುಗಾರರು (ಪಾಲಿಷ್ ಮಾಡುವವರು) | | |
| 3 | ಸಜ್ಜುಗೊಳಿಸುವ ಕೆಲಸಗಾರರು (2ನೇ ದರ್ಜೆ) | | |
| | **ಈ. ಅತಿ ಕುಶಲ ಕಾರ್ಮಿಕರು** | | |
| 1 | ನಮೂನೆಗಳ ತಯಾರಕರು | 160–00 | 157–50 |

| ಕ್ರ. ಸಂ. | ಕೆಲಸದ ವರ್ಗಗಳು | ಕನಿಷ್ಠ ವೇತನ ದರಗಳು [ಪ್ರತಿದಿನಕ್ಕೆ] | |
|---|---|---|---|
| | | ವಲಯ–1 | ವಲಯ–2 |
| 2 | ಒಳಾಂಗಣ ಅಂದಗೊಳಿಸುವವರು | | |
| 3 | ಸಜ್ಜುಗೊಳಿಸುವ ವಸ್ತು ತಯಾರಕರು (ಆಫ್ ಹೋಲಸ್ಪಿ ಮೇಕರ್ಸ್) | | |
| **2.** | **ಸಾಮಾನ್ಯ ವರ್ಗಗಳು(ಕಾರ್ಮಿಕರಲ್ಲದವರು)** | | |
| 1 | ಗುಮಾಸ್ತ ಸಿಬ್ಬಂದಿವರ್ಗದವರು | 148–10 | 144–95 |
| 2 | ಜವಾನರು | 144–43 | 143–37 |
| 3 | ಜಾಡಮಾಲಿಗಳು | | |
| 4 | ಹಮಾಲಿಗಳು | | |
| **3.** | **ಮರ ಕೊಯ್ಯುವ ಕಾರ್ಖಾನೆಗಳು** | | |
| | **ಅ. ಕುಶಲರಲ್ಲದ ಕಾರ್ಮಿಕರು** | | |
| 1 | ಹಮಾಲರು | 143–37 | |
| 2 | ಸಹಾಯಕರು | | |
| | **ಆ. ಅರೆ ಕುಶಲ ಕಾರ್ಮಿಕರು** | | |
| 1 | ಯಂತ್ರದ ಮೇಜು ನಿರ್ವಾಹಕನಿಗೆ ಸಹಾಯಕರು | 146–53 | |
| 2 | ಕೈಯಿಂದ ಕೊಯ್ದು ದಿಮ್ಮಿ ತುಂಡು ಮಾಡುವವರು | | |
| 3 | ತಳ್ಳುಬಂಡಿ ನಿರ್ವಾಹಕರು | | |
| | **ಇ. ಕುಶಲ ಕಾರ್ಮಿಕರು** | | |
| 1 | ಯಂತ್ರ ಮೇಜು ನಿರ್ವಹಣೆ ಮತ್ತು ಮೇಸ್ತ್ರಿಗಳು | 152–18 | |
| 2 | ಗರಗಸ ಚೂಪು ಮಾಡುವವರು | | |
| 3 | ಸುತ್ತು ಕೊಯ್ದ ನಿರ್ವಾಹಕರು | | |
| **4.** | **ಸಾಮಾನ್ಯ ವರ್ಗ (ಕಾರ್ಮಿಕರಲ್ಲದವರು)** | | |
| 1 | ಗುಮಾಸ್ತ ಸಿಬ್ಬಂದಿವರ್ಗ | 147–05 | |
| 2 | ಕಾವಲುಗಾರ | 144–43 | |

**ತುಟ್ಟಿಭತ್ಯೆ:–**

ಈ ಅಧಿಸೂಚನೆಯಲ್ಲಿ ಪ್ರಕಟಿಸಿರುವ ದರಗಳು ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ (1960–100) 3944 ಅಂಶಗಳಿಗೆ ವಿಲೀನಗೊಳಿಸಲಾಗಿದೆ. ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ 3944 ಅಂಶಗಳಿಗಿಂತ ಹೆಚ್ಚಾಗುವ ಪ್ರತಿ ಅಂಶಕ್ಕೆ ಎಲ್ಲಾ ವರ್ಗದ ಕಾರ್ಮಿಕರಿಗೆ ದಿನ ಒಂದಕ್ಕೆ 4 ಪೈಸೆಯಂತೆ ತುಟ್ಟಿ ಭತ್ಯೆ ನೀಡತಕ್ಕದ್ದು.

ತುಟ್ಟಿಭತ್ಯೆ ಲೆಕ್ಕಾಚಾರವನ್ನು ವರ್ಷಕ್ಕೊಮ್ಮೆ ಮಾಡಲಾಗುತ್ತದೆ. ಹಿಂದಿನ ಕ್ಯಾಲೆಂಡರ್ ವರ್ಷದ 12 ತಿಂಗಳುಗಳ ಗ್ರಾಹಕ ಬೆಲೆ ಸೂಚ್ಯಾಂಕಗಳ ಸರಾಸರಿ ಆಧಾರದ ಮೇಲೆ ಏಪ್ರಿಲ್ ಮೊದಲನೇ ದಿನಾಂಕದಂದು ಪ್ರತಿ ವರ್ಷ ಲೆಕ್ಕಾಚಾರ ಮಾಡತಕ್ಕದ್ದು. ಅಲ್ಲದೇ ಗ್ರಾಹಕ ಬೆಲೆ ಸೂಚ್ಯಂಕಗಳ ಸಂಖ್ಯೆಯ ವಾರ್ಷಿಕ ಸರಾಸರಿ ಆಧಾರದ ಮೇಲೆ ಹೆಚ್ಚುವರಿಯಾದ ಅಥವಾ ಕಡಿಮೆಯಾದ ಪ್ರಮಾಣವನ್ನು ಆಧರಿಸಿ ಲೆಕ್ಕ ಹಾಕಲಾಗುತ್ತದೆ. ಆದ್ದರಿಂದ ಮೊದಲ ಲೆಕ್ಕಾಚಾರವು ಗ್ರಾಹಕ ಬೆಲೆ ಸೂಚ್ಯಾಂಕದ (ಜನವರಿ 2010 ರಿಂದ ಡಿಸೆಂಬರ್ 2010)ರ ಸರಾಸರಿ ಆಧಾರದ ಮೇಲೆ 2011 ಏಪ್ರಿಲ್ 1 ನೇ ತಾರೀಖಿನಿಂದ ಜಾರಿಗೆ ಬರುತ್ತದೆ.

1. ದಿನಗೂಲಿ ಗಳಿಕೆದಾರರ ಸಂದರ್ಭದಲ್ಲಿ ಮಾಸಿಕ ವೇತನ ದರಗಳನ್ನು 26 ದಿನಗಳಿಂದ ವಿಭಾಗಿಸಿ, 4 ರಜಾ ದಿನಗಳಿಗೆ ವೇತನವನ್ನು ನೀಡುವುದೂ ಸೇರಿಂತೆ ಲೆಕ್ಕ ಹಾಕತಕ್ಕದ್ದು.

**ತುಟ್ಟಿಭತ್ಯೆಯನ್ನು ಲೆಕ್ಕಾಚಾರ ಮಾಡುವ ವಿಧಾನ:–**

(ಅ) ಮಾಸಿಕ ವೇತನವನ್ನು ಪಡೆಯುವವರು:–

ಪ್ರತಿ ವರ್ಷ ಹೆಚ್ಚಾಗುವ ಸಿ ಪಿ ಐ ಅಂಶಗಳು x ತುಟ್ಟಿಭತ್ಯೆಯ ದರ x 30 ದಿನಗಳು= ತುಟ್ಟಿಭತ್ಯೆ

(ಆ) ದಿನಗೂಲಿ ವೇತನ ಪಡೆಯುವವರು :–

$$\frac{\text{ಪ್ರತಿ ವರ್ಷ ಹೆಚ್ಚಾಗುವ ಅಂಶಗಳು x ತುಟ್ಟಿಭತ್ಯೆಯ ದರ x 30 = ತುಟ್ಟಿಭತ್ಯೆ}}{26}$$

2. ಮಹಿಳೆಯರು ಮತ್ತು ಪುರುಷರು ಒಂದೇ ರೀತಿಯ ಕೆಲಸವನ್ನು ನಿರ್ವಹಿಸಿದ ಸಂದರ್ಭಗಳಲ್ಲಿ ಉಭಯತ್ರರಿಗೂ ಸಮಾನ ದರದ ವೇತನಗಳನ್ನು ಸಂದಾಯ ಮಾಡತಕ್ಕದ್ದು.
3. ಪ್ರಸ್ತುತ ಪಾವತಿಸುತ್ತಿರುವ ವೇತನ ದರವು ಹೆಚ್ಚಾಗಿದ್ದಲ್ಲಿ ಆ ಹೆಚ್ಚಾಗಿರುವ ದರಗಳ ವೇತನವನ್ನು ಸಂದಾಯ ಮಾಡುವುದನ್ನು ಮುಂದುವರೆಸತಕ್ಕದ್ದು ಹಾಗೂ ಕಾಲ ಕಾಲಕ್ಕೆ ಹೆಚ್ಚಾಗುವ ತುಟ್ಟಿಭತ್ಯೆಯನ್ನು ಪಾವತಿಸತಕ್ಕದ್ದು.
4. ಅಧಿಸೂಚನೆಯಲ್ಲಿ ವರ್ಗವನ್ನು ನಮೂದಿಸದೆ ಇರುವ ವರ್ಗಗಳ ಕಾರ್ಮಿಕರಿಗೆ ಅದೇ ಸ್ವರೂಪದ ಕೆಲಸ ನಿರ್ವಹಿಸುತ್ತಿರುವ ಇತರೆ ವರ್ಗದ ಕಾರ್ಮಿಕರಿಗೆ ಪಾವತಿ ಮಾಡುತ್ತಿರುವ ವೇತನವನ್ನು ಸಂದಾಯ ಮಾಡತಕ್ಕದ್ದು.
5. ತುಂಡು ಆಧಾರದ ಮೇಲೆ ಕೆಲಸ ಮಾಡುವ ಕಾರ್ಮಿಕರ 8 ಗಂಟೆಗಳ ಕೆಲಸದ ವೇತನವು ಅದೇ ತರಹದ ಕೆಲಸಮಾಡುವ ಕಾರ್ಮಿಕರ ಒಂದು ದಿನದ ವೇತನಕ್ಕಿಂತ ಕಡಿಮೆ ಇರಕೂಡದು. ಒಂದು ದಿನದ ಕೆಲಸ ಎಂದರೆ 8 ಗಂಟೆಗಳ ಕೆಲಸ ಎಂದು ತಿಳಿಯತಕ್ಕದ್ದು. ಕಾರ್ಮಿಕರನ್ನು 8 ಗಂಟೆಗಳಿಗಿಂತ ಕಡಿಮೆ ಅವಧಿಯ ಕೆಲಸಕ್ಕೆ ನೇಮಿಸಿಕೊಂಡರೆ ಅಂತಹ ಕಡಿಮೆ ಅವಧಿಗೆ ಅನುಗುಣವಾಗಿ ವೇತನವನ್ನು ಆ ವರ್ಗದ ದಿನದ ಅಥವಾ ತಿಂಗಳ ವೇತನದ ಆಧಾರದ ಮೇಲೆ ಲೆಕ್ಕ ಹಾಕುವುದು.
6. ದಿನಗೂಲಿ ನೌಕರರಿಗೆ ಅವರ ದಿನದ ವೇತನ ದರಗಳನ್ನು ಕಂಡು ಹಿಡಿಯಬೇಕಾದಲ್ಲಿ ತಿಂಗಳ ವೇತನ ದರವನ್ನು 26 ರಿಂದ ಭಾಗಿಸಬೇಕು. ಭಾಗಿಸಿದಾಗ ಬಂದ ದರವು ಭಿನ್ನಾಂಕವಾಗಿದ್ದಲ್ಲಿ ಅದನ್ನು ಸಮೀಪದ ರೂಪಾಯಿಗೆ ಪೂರ್ಣಗೊಳಿಸಬೇಕು.
7. ಸಂಸ್ಥೆಯಲ್ಲಿ ನಿಗದಿಪಡಿಸಿರುವ ವಾರದ ರಜೆ ಅಥವಾ ಹಬ್ಬದ ರಜಾ ದಿನಗಳಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಕನಿಷ್ಠ ವೇತನ ಕಾಯ್ದೆ ಮತ್ತು ನಿಯಮಗಳಿಗೆ ಒಳಪಟ್ಟು ಸಾಮಾನ್ಯ ವೇತನದ ಎರಡುಪಟ್ಟು ವೇತನವನ್ನು ಪಾವತಿ ಮಾಡತಕ್ಕದ್ದು.
8. ಕೆಲಸಗಾರರು ದಿನದ ನಿಗಧಿತ ಅವಧಿಗಿಂತ ಹೆಚ್ಚು ಸಮಯ ಕೆಲಸ ನಿರ್ವಹಿಸಿದಲ್ಲಿ ಅಂತಹ ಹೆಚ್ಚುವರಿ ಅವಧಿ ಕೆಲಸಕ್ಕೆ ಆತನ ವೇತನದ ಎರಡುಪಟ್ಟು ವೇತನವನ್ನು ಪಾವತಿಸತಕ್ಕದ್ದು.
9. ವೇತನ ಲೆಕ್ಕಾಚಾರದಲ್ಲಿ ಚಿಲ್ಲರೆ ಬಂದ ಪಕ್ಷದಲ್ಲಿ ಅದನ್ನು ಸಮೀಪದ 50 ಪೈಸೆಗೆ ಪೂರ್ಣಗೊಳಿಸುವುದು.
10. ಟ್ರೈನಿಗಳಿಗೆ ಆ ವರ್ಗದ ನೌಕರರು ಪಡೆಯುತ್ತಿರುವ ವೇತನದ ಪ್ರತಿಶತ 75 ರಷ್ಟು ವೇತನವನ್ನು ಶಿಷ್ಯ ವೇತನವನ್ನಾಗಿ ಪಾವತಿಸತಕ್ಕದ್ದು.

ವಲಯ–1 : ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಮತ್ತು ಗೊತ್ತುಪಡಿಸಿದ ಆಗ್ಲೋಮರೇಷನ್ ಪ್ರದೇಶಗಳು ಹಾಗೂ ರಾಜ್ಯದ ಎಲ್ಲಾ ಮಹಾನಗರಪಾಲಿಕೆಗಳು.

ವಲಯ–2 : ವಲಯ–1ರಲ್ಲಿ ನಮೂದಿಸಿರುವ ಪ್ರದೇಶಗಳನ್ನು ಹೊರತುಪಡಿಸಿ ರಾಜ್ಯದ ಇತರೆ ಭಾಗಗಳು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಆರ್. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ
ಕಾರ್ಮಿಕ ಇಲಾಖೆ

# ವಿಶೇಷ ಪತ್ರಿಕೆ


| ಭಾಗ – IV-A | ಬೆಂಗಳೂರು, ಗುರುವಾರ, ಅಕ್ಟೋಬರ್ ೧೩, ೨೦೧೧ (ಆಶ್ವಯುಜ ೨೧, ಶಕ ವರ್ಷ ೧೯೩೩) | ನಂ. ೮೭೧ |
|---|---|---|


## ಕಾರ್ಮಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಾಇ 76 ಎಲ್ಎಂಡಬ್ಲ್ಯೂ 2010, ಬೆಂಗಳೂರು, ದಿನಾಂಕ: 12–10–2011**

ಕರ್ನಾಟಕ ರಾಜ್ಯಾದ್ಯಂತ **"ಕಲ್ಲು ಒಡೆಯುವುದು ಅಥವಾ ಕಲ್ಲುಪುಡಿ ಮಾಡುವುದು"** ಉದ್ದಿಮೆಯಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಕನಿಷ್ಠ ವೇತನವನ್ನು ಪರಿಷ್ಕರಿಸಲು ಸರ್ಕಾರದ ಕರಡು ಪ್ರಸ್ತಾವನೆಯನ್ನು ದಿನಾಂಕ: 24–2–2011ರ ಕರ್ನಾಟಕ ರಾಜ್ಯ ಪತ್ರದ ಭಾಗ–4[ಎ]ರಲ್ಲಿ ಪ್ರಕಟಿಸಿ, ಕನಿಷ್ಠ ವೇತನ ಕಾಯ್ದೆ 1948 [ಕೇಂದ್ರಾಧಿನಿಯಮ ಸಂಖ್ಯೆ: 11] ರ ಸೆಕ್ಷನ್ 5(1)(ಬಿ) ಪ್ರಕಾರ ಇದರಿಂದ ಭಾಧಿತರಾಗುವ/ ಸಂಬಂಧವಿರುವ ವ್ಯಕ್ತಿಗಳ ಗಮನಕ್ಕೆ

ತರಲಾಗಿದ್ದು, ಅವರಿಂದ ಸಲಹೆ/ಆಕ್ಷೇಪಣೆಗಳನ್ನು ಸ್ವೀಕರಿಸಲು 2 ತಿಂಗಳ ಕಾಲಾವಧಿಯನ್ನು ನೀಡಲಾಗಿತ್ತು. ಈ ಅವಧಿಯಲ್ಲಿ ಯಾವುದೇ ಸಲಹೆ/ಆಕ್ಷೇಪಣೆಗಳು ಸರ್ಕಾರದಲ್ಲಿ ಸ್ವೀಕೃತವಾಗಿರುವುದಿಲ್ಲ. ಕರಡು ಪ್ರಸ್ತಾವನೆಯನ್ನು ರಾಜ್ಯ ಕನಿಷ್ಠ ವೇತನ ಸಲಹಾ ಮಂಡಳಿಯ ಮುಂದೆ ಮಂಡಿಸಲಾಗಿತ್ತು. ಸರ್ಕಾರದ ಪ್ರಸ್ತಾವನೆಯನ್ನು ಸುಧೀರ್ಘವಾಗಿ ಸಮಾಲೋಚಿಸಿ ಅಂತಿಮ ಅಧಿಸೂಚನೆಯನ್ನು ಹೊರಡಿಸಲು ಮಂಡಳಿಯು ಸರ್ಕಾರಕ್ಕೆ ತನ್ನ ಶಿಫಾರಸ್ಸನ್ನು ನೀಡಿರುತ್ತದೆ.

ಕರ್ನಾಟಕ ರಾಜ್ಯ ಕನಿಷ್ಠ ವೇತನ ಸಲಹಾ ಮಂಡಳಿಯ ಶಿಫಾರಸ್ಸನ್ನು ಪರಿಗಣನೆಗೆ ತೆಗೆದುಕೊಂಡು, ಕನಿಷ್ಠ ವೇತನ ಕಾಯ್ದೆ 1948 [ಕೇಂದ್ರಾಧಿನಿಯಮ ಸಂಖ್ಯೆ: 11] ರ ಸೆಕ್ಷನ್ 3(1)(ಬಿ) ಹಾಗೂ 5(1)(ಬಿ) ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮತ್ತು ಈ ಹಿಂದಿನ ಎಲ್ಲಾ ಅಧಿಸೂಚನೆಗಳನ್ನು ರದ್ದುಪಡಿಸಿ, ಕರ್ನಾಟಕ ರಾಜ್ಯಾದ್ಯಂತ ಯಾವುದೇ **"ಕಲ್ಲು ಒಡೆಯುವುದು ಅಥವಾ ಕಲ್ಲುಪುಡಿ ಮಾಡುವುದು"** ಉದ್ದಿಮೆಯ ಯಾವುದೇ ಕೆಲಸದಲ್ಲಿ ತೊಡಗಿರುವ ಕಾರ್ಮಿಕ ವರ್ಗದವರಿಗೆ ದಿನಾಂಕ: 1–4–2011 ರಿಂದ ಅನ್ವಯವಾಗುವಂತೆ ಕನಿಷ್ಟ ವೇತನವನ್ನು ಈ ಅಧಿಸೂಚನೆಯ ಅನುಸೂಚಿಯಲ್ಲಿ ಇರುವಂತೆ ಪರಿಷ್ಕರಿಸಲಾಗಿದೆ.

**ಅನುಸೂಚಿ**

| ಕ್ರ. ಸಂ | ಕೆಲಸದ ವರ್ಗಗಳು | ಕನಿಷ್ಠ ವೇತನ ತಿಂಗಳಿಗೆ [ರೂಪಾಯಿಗಳಲ್ಲಿ] |
|---|---|---|
| **1** | **2** | **3** |
| 1 | ಮೇಸ್ತ್ರೀ | 4650–10 |
| 2 | ಚಾಲಕ (ಇನ್ಜಿನ್ ಸ್ಟ್ಯಾಟಿಕ್) | 3961–33 |
| 3 | ಬ್ಲಾಸ್ಟರ್ಸ್ | |
| 4 | ಬ್ಲಾಕ್ ಸ್ಮಿತ್ | |
| 5 | ಸ್ಟೋನ್ ಬ್ರೇಕಿಂಗ್ | 3452–08 |
| 6 | ಮೆಟಲ್ ಜೆಲ್ಲಿ ಕ್ರಷರ್ಸ್ | |
| 7 | ಲೇಬರರ್ಸ್ (ಕುಶಲರಲ್ಲದವರು) | |
| 8 | ಲಾರಿ ಚಾಲಕರು | 4461–33 |
| 9 | ಲಾರಿಯ ಕ್ಲೀನರ್‌ಗಳು | 3777–58 |
| 10 | ಮೇಲೆ ಕಾಣಿಸದಿರುವ ಯಾವುದೇ ಕುಶಲರಲ್ಲದ ಕಾರ್ಮಿಕರಿಗೆ, ಮಜ್ದೂರ್‌ಗಳಿಗೆ | 3452–08 |

**ತುಟ್ಟಿಭತ್ಯೆ:–**

ಈ ಅಧಿಸೂಚನೆಯಲ್ಲಿ ಪ್ರಕಟಿಸಿರುವ ದರಗಳು ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ (1960–100) 3944 ಅಂಶಗಳಿಗೆ ವಿಲೀನಗೊಳಿಸಲಾಗಿದೆ. ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ 3944 ಅಂಶಗಳಿಗಿಂತ ಹೆಚ್ಚಾಗುವ ಪ್ರತಿ ಅಂಶಕ್ಕೆ ಎಲ್ಲಾ ವರ್ಗದ ಕಾರ್ಮಿಕರಿಗೆ ದಿನ ಒಂದಕ್ಕೆ 4 ಪೈಸೆಯಂತೆ ತುಟ್ಟಿ ಭತ್ಯೆ ನೀಡತಕ್ಕದ್ದು.

ತುಟ್ಟಿಭತ್ಯೆ ಲೆಕ್ಕಾಚಾರವನ್ನು ವರ್ಷಕ್ಕೊಮ್ಮೆ ಮಾಡಲಾಗುತ್ತದೆ. ಹಿಂದಿನ ಕ್ಯಾಲೆಂಡರ್ ವರ್ಷದ 12 ತಿಂಗಳುಗಳ ಗ್ರಾಹಕ ಬೆಲೆ ಸೂಚ್ಯಾಂಕಗಳ ಸರಾಸರಿ ಆಧಾರದ ಮೇಲೆ ಏಪ್ರಿಲ್ ಮೊದಲನೇ ದಿನಾಂಕದಂದು ಪ್ರತಿ ವರ್ಷ ಲೆಕ್ಕಾಚಾರ ಮಾಡತಕ್ಕದ್ದು. ಅಲ್ಲದೇ ಗ್ರಾಹಕ ಬೆಲೆ ಸೂಚ್ಯಂಕಗಳ ಸಂಖ್ಯೆಯ ವಾರ್ಷಿಕ ಸರಾಸರಿ ಆಧಾರದ ಮೇಲೆ ಹೆಚ್ಚುವರಿಯಾದ ಅಥವಾ ಕಡಿಮೆಯಾದ ಪ್ರಮಾಣವನ್ನು ಆಧರಿಸಿ ಲೆಕ್ಕ ಹಾಕಲಾಗುತ್ತದೆ. ಆದ್ದರಿಂದ ಮೊದಲ ಲೆಕ್ಕಾಚಾರವು ಗ್ರಾಹಕ ಬೆಲೆ ಸೂಚ್ಯಾಂಕದ (ಜನವರಿ 2010 ರಿಂದ ಡಿಸೆಂಬರ್ 2010)ರ ಸರಾಸರಿ ಆಧಾರದ ಮೇಲೆ 2011 ಏಪ್ರಿಲ್ 1 ನೇ ತಾರೀಖಿನಿಂದ ಜಾರಿಗೆ ಬರುತ್ತದೆ.

1. ದಿನಗೂಲಿ ಗಳಿಕೆದಾರರ ಸಂದರ್ಭದಲ್ಲಿ ಮಾಸಿಕ ವೇತನ ದರಗಳನ್ನು 26 ದಿನಗಳಿಂದ ವಿಭಾಗಿಸಿ, 4 ರಜಾ ದಿನಗಳಿಗೆ ವೇತನವನ್ನು ನೀಡುವುದೂ ಸೇರಿಂತೆ ಲೆಕ್ಕ ಹಾಕತಕ್ಕದ್ದು.

**ತುಟ್ಟಿಭತ್ಯೆಯನ್ನು ಲೆಕ್ಕಾಚಾರ ಮಾಡುವ ವಿಧಾನ**

ಅ) ಮಾಸಿಕ ವೇತನವನ್ನು ಪಡೆಯುವವರು:–

ಪ್ರತಿ ವರ್ಷ ಹೆಚ್ಚಾಗುವ ಸಿ ಪಿ ಐ ಅಂಶಗಳು x ತುಟ್ಟಿಭತ್ಯೆಯ ದರ x 30 ದಿನಗಳು= ತುಟ್ಟಿಭತ್ಯೆ

ಆ) ದಿನಗೂಲಿ ವೇತನ ಪಡೆಯುವವರು :–

ಪ್ರತಿ ವರ್ಷ ಹೆಚ್ಚಾಗುವ ಅಂಶಗಳು x ತುಟ್ಟಿಭತ್ಯೆಯ ದರ x 30 / 26 = ತುಟ್ಟಿಭತ್ಯೆ

2. ಮಹಿಳೆಯರು ಮತ್ತು ಪುರುಷರು ಒಂದೇ ರೀತಿಯ ಕೆಲಸವನ್ನು ನಿರ್ವಹಿಸಿದ ಸಂದರ್ಭಗಳಲ್ಲಿ ಉಭಯತ್ರರಿಗೂ ಸಮಾನ ದರದ ವೇತನಗಳನ್ನು ಸಂದಾಯ ಮಾಡತಕ್ಕದ್ದು.

3. ಪ್ರಸ್ತುತ ಪಾವತಿಸುತ್ತಿರುವ ವೇತನ ದರವು ಹೆಚ್ಚಾಗಿದ್ದಲ್ಲಿ ಆ ಹೆಚ್ಚಾಗಿರುವ ದರಗಳ ವೇತನವನ್ನು ಸಂದಾಯ ಮಾಡುವುದನ್ನು ಮುಂದುವರೆಸತಕ್ಕದ್ದು ಹಾಗೂ ಕಾಲ ಕಾಲಕ್ಕೆ ಹೆಚ್ಚಾಗುವ ತುಟ್ಟಿಭತ್ಯೆಯನ್ನು ಪಾವತಿಸತಕ್ಕದ್ದು.

4. ಅಧಿಸೂಚನೆಯಲ್ಲಿ ವರ್ಗವನ್ನು ನಮೂದಿಸದೆ ಇರುವ ವರ್ಗಗಳ ಕಾರ್ಮಿಕರಿಗೆ ಅದೇ ಸ್ವರೂಪದ ಕೆಲಸ ನಿರ್ವಹಿಸುತ್ತಿರುವ ಇತರೆ ವರ್ಗದ ಕಾರ್ಮಿಕರಿಗೆ ಪಾವತಿ ಮಾಡುತ್ತಿರುವ ವೇತನವನ್ನು ಸಂದಾಯ ಮಾಡತಕ್ಕದ್ದು.

5. ತುಂಡು ಆಧಾರದ ಮೇಲೆ ಕೆಲಸ ಮಾಡುವ ಕಾರ್ಮಿಕರ 8 ಗಂಟೆಗಳ ಕೆಲಸದ ವೇತನವು ಅದೇ ತರಹದ ಕೆಲಸಮಾಡುವ ಕಾರ್ಮಿಕರ ಒಂದು ದಿನದ ವೇತನಕ್ಕಿಂತ ಕಡಿಮೆ ಇರಕೂಡದು. ಒಂದು ದಿನದ ಕೆಲಸ ಎಂದರೆ 8 ಗಂಟೆಗಳ ಕೆಲಸ ಎಂದು ತಿಳಿಯತಕ್ಕದ್ದು. ಕಾರ್ಮಿಕರನ್ನು 8 ಗಂಟೆಗಳಿಗಿಂತ ಕಡಿಮೆ ಅವಧಿಯ ಕೆಲಸಕ್ಕೆ ನೇಮಿಸಿಕೊಂಡರೆ ಅಂತಹ ಕಡಿಮೆ ಅವಧಿಗೆ ಅನುಗುಣವಾಗಿ ವೇತನವನ್ನು ಆ ವರ್ಗದ ದಿನದ ಅಥವಾ ತಿಂಗಳ ವೇತನದ ಆಧಾರದ ಮೇಲೆ ಲೆಕ್ಕ ಹಾಕುವುದು.

6. ದಿನಗೂಲಿ ನೌಕರರಿಗೆ ಅವರ ದಿನದ ವೇತನ ದರಗಳನ್ನು ಕಂಡು ಹಿಡಿಯಬೇಕಾದಲ್ಲಿ ತಿಂಗಳ ವೇತನ ದರವನ್ನು 26 ರಿಂದ ಭಾಗಿಸಬೇಕು. ಭಾಗಿಸಿದಾಗ ಬಂದ ದರವು ಭಿನ್ನಾಂಕವಾಗಿದ್ದಲ್ಲಿ ಅದನ್ನು ಸಮೀಪದ ರೂಪಾಯಿಗೆ ಪೂರ್ಣಗೊಳಿಸಬೇಕು.

7. ಸಂಸ್ಥೆಯಲ್ಲಿ ನಿಗದಿಪಡಿಸಿರುವ ವಾರದ ರಜೆ ಅಥವಾ ಹಬ್ಬದ ರಜಾ ದಿನಗಳಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಕನಿಷ್ಟ ವೇತನ ಕಾಯ್ದೆ ಮತ್ತು ನಿಯಮಗಳಿಗೆ ಒಳಪಟ್ಟು ಸಾಮಾನ್ಯ ವೇತನದ ಎರಡುಪಟ್ಟು ವೇತನವನ್ನು ಪಾವತಿ ಮಾಡತಕ್ಕದ್ದು.

8. ಕೆಲಸಗಾರರು ದಿನದ ನಿಗಧಿತ ಅವಧಿಗಿಂತ ಹೆಚ್ಚು ಸಮಯ ಕೆಲಸ ನಿರ್ವಹಿಸಿದಲ್ಲಿ ಅಂತಹ ಹೆಚ್ಚುವರಿ ಅವಧಿ ಕೆಲಸಕ್ಕೆ ಆತನ ವೇತನದ ಎರಡುಪಟ್ಟು ವೇತನವನ್ನು ಪಾವತಿಸತಕ್ಕದ್ದು.

9. ವೇತನ ಲೆಕ್ಕಾಚಾರದಲ್ಲಿ ಚಿಲ್ಲರೆ ಬಂದ ಪಕ್ಷದಲ್ಲಿ ಅದನ್ನು ಸಮೀಪದ 50 ಪೈಸೆಗೆ ಪೂರ್ಣಗೊಳಿಸುವುದು.

10. ಟ್ರೈನಿಗಳಿಗೆ ಆ ವರ್ಗದ ನೌಕರರು ಪಡೆಯುತ್ತಿರುವ ವೇತನದ ಪ್ರತಿಶತ 75 ರಷ್ಟು ವೇತನವನ್ನು ಶಿಷ್ಯ ವೇತನವನ್ನಾಗಿ ಪಾವತಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಆರ್. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ
ಕಾರ್ಮಿಕ ಇಲಾಖೆ

# ವಿಶೇಷ ಪತ್ರಿಕೆ


| ಭಾಗ – I | ಬೆಂಗಳೂರು, ಶುಕ್ರವಾರ, ಅಕ್ಟೋಬರ್ ೧೪, ೨೦೧೧ (ಆಶ್ವಯುಜ ೨೨, ಶಕ ವರ್ಷ ೧೯೩೩) | ನಂ. ೮೭೨ |
|---|---|---|


## ಸಮಾಜ ಕಲ್ಯಾಣ ಸಚಿವಾಲಯ

### ತಿದ್ದುಪಡಿ ಆದೇಶ

**ಸಂಖ್ಯೆ: ಸಕಇ 415 ಬಿಇಟಿ 2008 (ಭಾ), ಬೆಂಗಳೂರು, ದಿನಾಂಕ: 14ನೇ ಅಕ್ಟೋಬರ್, 2011**

**ವಿಷಯ:** ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ಮೆಟ್ರಿಕ್ ನಂತರದ ನಿಲಯ ಪಾಲಕರ ಹುದ್ದೆಗಳನ್ನು ಬಿ.ಸಿ.ಎಂ. ವಿಸ್ತರಣಾಧಿಕಾರಿಗಳ ಹುದ್ದೆಯಲ್ಲಿ ಆಡಳಿತ ಹಿತದೃಷ್ಟಿಯಿಂದ ವಿಲೀನಗೊಳಿಸಿ ಏಕ ಹುದ್ದೆಯಾಗಿ ಆದೇಶಿಸುವ ಬಗ್ಗೆ.

ಸರ್ಕಾರಿ ಆದೇಶ ಸಂಖ್ಯೆ ಸಕಇ 415 ಬಿಇಟಿ 2008, ದಿನಾಂಕ: 26.6.2010ರ ಆದೇಶ ಭಾಗದ 7 ಮತ್ತು 8ನೇ ಸಾಲಿನಲ್ಲಿಯ **"ಆದರೆ ಅವರು ನಿಲಯ ಪಾಲಕರಾಗಿಯೇ ಕಾರ್ಯನಿರ್ವಹಿಸತಕ್ಕದ್ದು"** ಎಂಬ ಪದಗಳನ್ನು ಆದೇಶ ಭಾಗದಿಂದ ತೆಗೆದು ಹಾಕಲಾಗಿದೆ. ಇನ್ನುಳಿದಂತೆ ಆದೇಶದಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ ಎಂದು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಂ.ಬಾಟೆ**
ಸರ್ಕಾರದ ಅಧೀನ ಕಾರ್ಯದರ್ಶಿ–3
ಸಮಾಜ ಕಲ್ಯಾಣ ಇಲಾಖೆ

ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಶುಕ್ರವಾರ, ಅಕ್ಟೋಬರ್ ೧೪, ೨೦೧೧ (ಆಶ್ವಯುಜ ೨೨, ಶಕ ವರ್ಷ ೧೯೩೩) | ನಂ. ೮೭೩ |
|---|---|---|

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 78 ಸೇಅನೇ 2011, ಬೆಂಗಳೂರು, ದಿನಾಂಕ: 13.10.2011**

ಕರ್ನಾಟಕ ಸಿವಿಲ್ ಸೇವಾ (ಅನುಕಂಪದ ಆಧಾರದ ಮೇಲೆ ನೇಮಕಾತಿ) ನಿಯಮಗಳು, 1996, ಇದನ್ನು ಮತ್ತಷ್ಟು ತಿದ್ದುಪಡಿ ಮಾಡುವುದಕ್ಕೆ ದಿನಾಂಕ: 06.09.2011ರ ಅಧಿಸೂಚನೆ ಸಂಖ್ಯೆ: ಸಿಆಸುಇ 78 ಸೇಅನೇ 2011 ರಲ್ಲಿ ಪ್ರಕಟಿಸಿರುವ ಈ ಮುಂದಿನ ನಿಯಮಗಳ ಕರಡನ್ನು ಅಧಿಕೃತ ರಾಜ್ಯಪತ್ರದಲ್ಲಿ ಇದರ ಪ್ರಕಟಣೆಯ ದಿನಾಂಕದಿಂದ 15 ದಿನಗಳೊಳಗಾಗಿ ಅದರಿಂದ ಬಾಧಿತರಾಗುವ ಸಂಭವವಿರುವ ಎಲ್ಲ ವ್ಯಕ್ತಿಗಳಿಂದ ಆಕ್ಷೇಪಣೆಗಳನ್ನು ಮತ್ತು ಸಲಹೆಗಳನ್ನು ಆಹ್ವಾನಿಸಿ ದಿನಾಂಕ: 08.09.2011ರ ಕರ್ನಾಟಕ ರಾಜ್ಯಪತ್ರದ ಭಾಗ–iv ಎ (ಪಿ.ಆರ್. ಸಂ: 808) ರಲ್ಲಿ ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ ಅಧಿನಿಯಮ, 1978 (1990ರ ಕರ್ನಾಟಕ ಅಧಿನಿಯಮ 14)ರ 3ನೇ ಪ್ರಕರಣದ (2) ನೇ ಉಪ ಪ್ರಕರಣದ (ಎ) ಖಂಡದ ಮೂಲಕ ಅಗತ್ಯಪಡಿಸಲಾದಂತೆ ಪ್ರಕಟಿಸಲಾಗಿರುವುದರಿಂದ;

ಸದರಿ ರಾಜ್ಯಪತ್ರವನ್ನು ದಿನಾಂಕ: 08.09.2011 ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ;

ಮತ್ತು, ಸದರಿ ಕರಡಿನ ಬಗ್ಗೆ ಯಾವುದೇ ಆಕ್ಷೇಪಣೆ/ಸಲಹೆಗಳು ಸ್ವೀಕೃತವಾಗದಿರುವುದರಿಂದ;

ಈಗ ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ ಅಧಿನಿಯಮ, 1978 (1990ರ ಕರ್ನಾಟಕ ಅಧಿನಿಯಮ, 14)ರ 8ನೇ ಪ್ರಕರಣದೊಂದಿಗೆ ಓದಿಕೊಂಡ 3ನೇ ಪ್ರಕರಣದ (1)ನೇ ಉಪ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಮೂಲಕ ಈ ಕೆಳಕಂಡ ನಿಯಮಗಳನ್ನು ರಚಿಸುತ್ತದೆ, ಎಂದರೆ:–

### ನಿಯಮಗಳು

**1. ಶಿರೋನಾಮೆ ಮತ್ತು ಪ್ರಾರಂಭ.– (1)** ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ಅನುಕಂಪದ ಆಧಾರದ ಮೇಲೆ ನೇಮಕಾತಿ) (ಆರನೇ ತಿದ್ದುಪಡಿ) ನಿಯಮಗಳು, 2011 ಎಂದು ಕರೆಯತಕ್ಕದ್ದು.

(2) ಇವು, ಅಧಿಕೃತ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ನಿಯಮ 1ಕ್ಕೆ ತಿದ್ದುಪಡಿ:–** ಕರ್ನಾಟಕ ಸಿವಿಲ್ ಸೇವಾ (ಅನುಕಂಪದ ಆಧಾರದ ಮೇಲೆ ನೇಮಕಾತಿ) ನಿಯಮಗಳು, 1996 (ಇನ್ನು ಮುಂದೆ ಸದರಿ ನಿಯಮಗಳೆಂದು ಉಲ್ಲೇಖಿಸಲಾಗುವುದು)ರ ನಿಯಮ 1ರ ಉಪ ನಿಯಮ (3)ರಲ್ಲಿ "ಮೃತ ಸರ್ಕಾರಿ ನೌಕರ" ಎಂಬ ಪದಗಳ ನಂತರ "ಅಥವಾ ವೈದ್ಯಕೀಯ ಕಾರಣಗಳ ಮೇಲೆ ನಿವೃತ್ತಿ ಹೊಂದಿದ ಸರ್ಕಾರಿ ನೌಕರ" ಎಂಬ ಪದಗಳನ್ನು ಸೇರಿಸತಕ್ಕದ್ದು.

**3. ಹೊಸನಿಯಮ 3ಅ ರ ಸೇರ್ಪಡೆ:–** ಸದರಿ ನಿಯಮಗಳ ನಿಯಮ 3ರ ನಂತರ ಈ ಕೆಳಕಂಡದ್ದನ್ನು ಸೇರಿಸತಕ್ಕದ್ದು. ಅಂದರೆ:–

**3ಅ. ವೈದ್ಯಕೀಯ ಕಾರಣಗಳ ಮೇಲೆ ನಿವೃತ್ತಿ ಹೊಂದಿದ ಸರ್ಕಾರಿ ನೌಕರರ ಅವಲಂಬಿತರ ನೇಮಕಾತಿ**

(1) ವೈದ್ಯಕೀಯ ಕಾರಣಗಳ ಮೇಲೆ ನಿವೃತ್ತಿ ಹೊಂದಿದ ಸರ್ಕಾರಿ ನೌಕರರ ಅವಲಂಬಿತರು ಈ ನಿಯಮಗಳ ವ್ಯಾಪಕತೆಗೆ ಹಾನಿ ಉಂಟು ಮಾಡದಂತೆ ಅನುಕಂಪದ ಆಧಾರದ ಮೇಲೆ ನೇಮಕಾತಿ ಹೊಂದಲು ಅರ್ಹರಾಗುತ್ತಾರೆ.

(2) ಈ ನಿಯಮಗಳ ನಿಯಮ 9ನ್ನು ಹೊರತುಪಡಿಸಿ, ಮೃತ ಸರ್ಕಾರಿ ನೌಕರನ ಅವಲಂಬಿತರಿಗೆ ಅನ್ವಯವಾಗುವ ಅರ್ಹತೆಯ ಎಲ್ಲಾ ಷರತ್ತುಗಳು, ನೇಮಕಾತಿ ನಿಬಂಧನೆಗಳು ಮತ್ತು ಅರ್ಜಿ ಸಲ್ಲಿಸುವ ಮತ್ತು ನೇಮಕಾತಿ ಮಾಡುವ ಕಾರ್ಯವಿಧಾನದ ನಿಯಮಗಳು, ವೈದ್ಯಕೀಯ ಕಾರಣಗಳ ಮೇಲೆ ನಿವೃತ್ತಿ ಹೊಂದಿದ ಸರ್ಕಾರಿ ನೌಕರನ ಅವಲಂಬಿತರಿಗೆ, ನೌಕರನು ನಿವೃತ್ತಿ ಹೊಂದಿದ ದಿನಾಂಕದಿಂದ ಯಥೋಚಿತ ವ್ಯತ್ಯಾಸಗಳೊಂದಿಗೆ ಅನ್ವಯವಾಗುತ್ತದೆ.

ಪರಂತು, ಕರ್ನಾಟಕ ಸಿವಿಲ್ ಸೇವಾ (ಅನುಕಂಪದ ಆಧಾರದ ಮೇಲೆ ನೇಮಕಾತಿ) (ಆರನೇ ತಿದ್ದುಪಡಿ) ನಿಯಮಗಳು, 2011 ಜಾರಿಗೆ ಬಂದ ದಿನಾಂಕದಂದು ವೈದ್ಯಕೀಯ ಕಾರಣಗಳ ಮೇಲೆ ನಿವೃತ್ತರಾದ ಸರ್ಕಾರಿ ನೌಕರರ ಅರ್ಹ ಅವಲಂಬಿತರು, ಸದರಿ ನಿಯಮಗಳು ಜಾರಿಗೆ ಬಂದ ದಿನಾಂಕದಿಂದ ಒಂದು ವರ್ಷದೊಳಗೆ ಅರ್ಜಿ ಸಲ್ಲಿಸತಕ್ಕದ್ದು.

**ವಿವರಣೆ**:– ಈ ನಿಯಮಗಳ ಉದ್ದೇಶಕ್ಕಾಗಿ,–

(i) "ವೈದ್ಯಕೀಯ ಕಾರಣಗಳ ಮೇಲೆ ನಿವೃತ್ತರಾದ ಸರ್ಕಾರಿ ನೌಕರ" ಎಂದರೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಿಂದ ಜಿಲ್ಲಾ ಮತ್ತು ತಾಲ್ಲೂಕು ಮಟ್ಟದಲ್ಲಿ ರಚಿತವಾದ ವೈದ್ಯಕೀಯ ಮಂಡಳಿಯು ನೀಡಿದ ಪ್ರಮಾಣ ಪತ್ರದನ್ವಯ ಸಾರ್ವಜನಿಕ ಸೇವೆಯ ಮೇಲೆ ಕರ್ತವ್ಯದಲ್ಲಿರುವಾಗ ದೈಹಿಕವಾಗಿ ಅಥವಾ ಮಾನಸಿಕವಾಗಿ ಶಾಶ್ವತವಾಗಿ ಅಸಮರ್ಥರಾಗಿ ಕರ್ನಾಟಕ ಸಿವಿಲ್ ಸೇವಾ ನಿಯಮಗಳನ್ವಯ 1ನೇ ಜನವರಿ 2010 ರಂದು ಅಥವಾ ತದನಂತರ ವೈದ್ಯಕೀಯ ಕಾರಣಗಳ ಮೇಲೆ ನಿವೃತ್ತರಾದ ಸರ್ಕಾರಿ ನೌಕರ.

(ii) "ಕರ್ತವ್ಯದ ಮೇಲಿರುವಾಗ" ಎಂಬ ಪದಗಳು ಮನೆಯಿಂದ ಕರ್ತವ್ಯ ನಿರ್ವಹಿಸುವ ಸ್ಥಳಕ್ಕೆ ಹೋಗಿಬರುವ ಪ್ರಯಾಣವನ್ನು ಒಳಗೊಂಡಿರುತ್ತವೆ.

(iii) ಮೃತ ಸರ್ಕಾರಿ ನೌಕರನಿಗೆ ಸಂಬಂಧಿಸಿದಂತೆ ಪರಿಭಾಷಿಸಿರುವ "ಅವಲಂಬಿತರು" ಮತ್ತು "ಕುಟುಂಬದ ಸದಸ್ಯರು" ಎಂಬ ಪದಗಳು ವೈದ್ಯಕೀಯ ಕಾರಣಗಳ ಮೇಲೆ ನಿವೃತ್ತರಾದ ಸರ್ಕಾರಿ ನೌಕರರ ಅವಲಂಬಿತರಿಗೂ ಅರ್ಥೈಸಲ್ಪಡತಕ್ಕದ್ದು.

(iv) ಈ ನಿಯಮಗಳಲ್ಲಿ ಮೃತ ಸರ್ಕಾರಿ ನೌಕರನಿಗೆ ಸಂಬಂಧಿಸಿದಂತೆ ನಮೂದಾಗಿರುವ "ವಿಧವೆ" ಅಥವಾ "ವಿಧುರ" ಎಂಬ ಪದಗಳು ವೈದ್ಯಕೀಯ ಕಾರಣಗಳ ಮೇಲೆ ನಿವೃತ್ತರಾದ ಸರ್ಕಾರಿ ನೌಕರರ ಪ್ರಕರಣಗಳಲ್ಲಿ ಕ್ರಮವಾಗಿ 'ಪತ್ನಿ' ಅಥವಾ 'ಪತಿ' ಎಂದು ಪರಿಗಣಿಸಲ್ಪಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ದೇವರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ,
(ಸೇವಾ ನಿಯಮಗಳು–1)

## PERSONNEL AND ADMINISTRATIVE REFORMS SECRETARIAT

### NOTIFICATION

### No. DPAR 78 SCA 2011, Bangalore, dated: 13.10.2011

Whereas the draft of the following rules further to amend the Karnataka Civil Services (Appointment on Compassionate Grounds) Rules, 1996, was published as required by clause (a) of sub-section (2) of section 3 of the Karnataka State Civil Services Act, 1978 (Karnataka Act 14 of 1990) in Notification No. DPAR 78 SCA 2011 dated: 06.09.2011 in part IV A (P.R.No. 808) of the Karnataka Gazette dated: 08.09.2011 inviting objections and suggestions from all persons likely to be affected thereby within fifteen days from the date of its publication in the Official Gazette.

Whereas, the said Gazette was made available to the public on 08.09.2011.

And whereas, no objections and suggestions have been received in this behalf by the State Government.

Now, therefore, in exercise of the powers conferred by sub-section (1) of section 3 read with section 8 of the Karnataka State Civil Services Act, 1978 (Karnataka Act 14 of 1990) the Government of Karnataka hereby makes the following rules, namely:-

**R U L E S**

**1. Title and Commencement.-** (1) These rules may be called the Karnataka Civil Services (Appointment on Compassionate Grounds) (Sixth Amendment) Rules, 2011.

(2) They shall come into force from the date of their publication in the Official Gazette.

**2. Amendment of rule 1:-** In rule 1 of the Karnataka Civil Services (Appointment on Compassionate Grounds) Rules, 1996 (hereinafter referred to as the said rules), in sub-rule (3), after the words "deceased Government servant", the words "or a Government servant retired on medical grounds" shall be inserted.

**3. Insertion of new rule 3A.-** After rule 3 of the said rules, the following shall be inserted, namely:-

**“3A. Appointment of dependents of Government servant retired on medical grounds.-** (1) Without prejudice to the generality of these rules, dependents of the Government servant retired on medical grounds shall be eligible for appointment on compassionate grounds.

(2) All conditions of eligibility, conditions of appointment and the procedure of application and appointment except rule 9 as applicable to dependents of deceased Government servant under these rules shall mutatis mutandis apply to the dependents of the Government servant retired on medical grounds with effect from the date of his retirement on medical grounds.

Provided that all eligible dependents of Government servant retired on medical grounds on the date of commencement of the Karnataka Civil Services (Appointment on Compassionate Grounds) (Sixth Amendment) Rules, 2011 may apply within one year from the date of commencement of the said rules.

**Explanation.-** For the purpose of these rules,

(i) “Government servant retired on medical grounds” means a Government servant who on the ground of bodily or mental infirmity is permanently incapacitated while on duty for public service and retired on medical grounds as per the provisions of the Karnataka Civil Services Rules on or after the 1st day of January, 2010, as certified by the Medical Board constituted by the Department of Health and Family Welfare at district and taluk level.

(ii) The words “while on duty” includes his journey to and from his place of residence to the place of work.

(iii) The words “dependents” and “family members” defined in respect of deceased Government servant shall also be construed as dependents of a Government servant retired on medical grounds.

(iv) In these rules, wherever the words “widow” or “widower” occurs in respect of deceased Government servant, it shall be construed as “wife” or “husband” of the Government servant retired on medical grounds.

By Order and in the name of the Governor of Karnataka,

**DEVARAJU**
Under Secretary to Government,
Department of Personnel and Administrative
Reforms (Service Rules-1)

# ವಿಶೇಷ ಪತ್ರಿಕೆ



| ಭಾಗ – I | ಬೆಂಗಳೂರು, ಶುಕ್ರವಾರ, ಅಕ್ಟೋಬರ್ ೧೪, ೨೦೧೧ (ಆಶ್ವಯುಜ ೨೨, ಶಕ ವರ್ಷ ೧೯೩೩) | ನಂ. ೮೭೪ |
|---|---|---|



## ಕರ್ನಾಟಕ ಸರ್ಕಾರದ ನಡವಳಿಗಳು

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಅಭಿವೃದ್ಧಿ ಸಾಲ ಯೋಜನೆಗೆ ಸಂಬಂಧಿಸಿದಂತೆ ಒಂದಾವರ್ತಿ ತೀಳುವಳಿ ಯೋಜನೆ (ಏಕಗಂಟು) ಜಾರಿಗೆ ತರುವ ಕುರಿತು.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ: ಸಿಐ 4 ಎಸ್‌ಪಿಐ 2011, ದಿನಾಂಕ: 18.04.2001.
2. ಸರ್ಕಾರದ ಆದೇಶ ಸಂಖ್ಯೆ: ಸಿಐ 4 ಎಸ್‌ಪಿಐ 2001, ದಿನಾಂಕ: 08.04.2002.
3. ಸರ್ಕಾರದ ಆದೇಶ ಸಂಖ್ಯೆ: ಸಿಐ 4 ಎಸ್‌ಪಿಐ 2001, ದಿನಾಂಕ: 26.04.2002.
4. ಸರ್ಕಾರದ ಆದೇಶ ಸಂಖ್ಯೆ: ಸಿಐ 4 ಎಸ್‌ಪಿಐ 2001, ದಿನಾಂಕ: 27.01.2003.
5. ಕೈಗಾರಿಕಾಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಗಾರಿಕಾ ಮತ್ತು ವಾಣಿಜ್ಯ ಇಲಾಖೆ ರವರ ಪತ್ರ ಸಂಖ್ಯೆ: ಕೈಅ/ಇ4/ಅಭಿವೃದ್ಧಿ ಸಾಲ ಒ.ಟಿ.ಎಸ್ / 2009–10, ದಿನಾಂಕ: 15.04.2010.

**ಪ್ರಸ್ತಾವನೆ:–**

ಕರ್ನಾಟಕ ರಾಜ್ಯ ಸರ್ಕಾರವು ಕೈಗಾರಿಕಾಭಿವೃದ್ಧಿಗೆ ಪೂರಕವಾಗಿ, ಕಾಲಕಾಲಕ್ಕೆ ಘೋಷಿಸುತ್ತಿರುವ ಹೊಸ ಕೈಗಾರಿಕೆಗಳಿಗೆ ವಿವಿಧ ಕೈಗಾರಿಕಾ ನೀತಿಗಳಲ್ಲಿ ಉತ್ತೇಜನ ರಿಯಾಯಿತಿಗಳನ್ನು ನೀಡುತ್ತಾ ಬಂದಿದೆ. 1982ರ ಕೈಗಾರಿಕಾ ನೀತಿಯಲ್ಲಿ ಹೊಸ ಕೈಗಾರಿಕಾ ಬಂಡವಾಳ ಹೂಡಿಕೆಗಳಿಗೆ ಬಡ್ಡಿ ರಹಿತ ಅಭಿವೃದ್ಧಿ ಸಾಲ ಹಾಗೂ ಬಡ್ಡಿ ರಹಿತ ದುಡಿಮೆ ಬಂಡವಾಳ ಸಾಲದ ಯೋಜನೆಗಳನ್ನು ಘೋಷಿಸಿದೆ. ಸದರಿ ಯೋಜನೆಗಳಲ್ಲಿ ಬಹಳಷ್ಟು ಕೈಗಾರಿಕೋದ್ಯಮಿಗಳು ಅನುಕೂಲ ಪಡೆದುಕೊಂಡು ನಿಗಧಿತವಾಗಿ ಸಾಲಗಳನ್ನು ಸರ್ಕಾರಕ್ಕೆ ಮರುಪಾವತಿಸಿರುತ್ತಾರೆ.

2001ರಲ್ಲಿ ಕೈಗಾರಿಕಾದ್ಯೋಮಿಗಳ ಮನವಿಯಂತೆ ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಏಕಗಂಟು ತೀರುವಳಿ ಯೋಜನೆ (One Time Settlement) ಜಾರಿಗೆ ತರಲಾಗಿತ್ತು. ಯೋಜನೆಯನ್ನು ಜುಲೈ 2001 ರಿಂದ ಏಪ್ರಿಲ್ 2002 ರವರೆಗೆ ಘೋಷಿಸಿದ್ದು, ನಂತರ 30–9–2002 ವರೆಗೆ ವಿಸ್ತರಿಸಲಾಗಿರುತ್ತದೆ. ಈ ಅವಧಿಯಲ್ಲಿ ಅನೇಕ ಕೈಗಾರಿಕೋದ್ಯಮಿಗಳ ಏಕಗಂಟು ತೀರುವಳಿ ಯೋಜನೆಯ ಲಾಭ ಪಡೆದುಕೊಂಡಿರುತ್ತಾರೆ.

ಹಾಲಿ ದಿನಾಂಕ: 31–12–2009ಕ್ಕೆ ರಾಜ್ಯದ 847 ಕೈಗಾರಿಕಾ ಘಟಕಗಳು ರೂ. 23.77 ಕೋಟಿ ಅಸಲು, ರೂ. 78.48 ಕೋಟಿ ಬಡ್ಡಿ ಮತ್ತು ರೂ. 4.57 ಕೋಟಿ ಸುಸ್ತಿ ಬಡ್ಡಿ, ಒಟ್ಟು ರೂ. 106.82 ಕೋಟಿ ಪಾವತಿಸಬೇಕಾಗಿರುತ್ತದೆ.

ಕೈಗಾರಿಕೆಗಳ ಸಾಲ ಮರು ಪಾವತಿ ಮಾಡದಿರುವುದಕ್ಕೆ ಈ ಕೆಳಕಂಡ ಕಾರಣಗಳನ್ನು ಗುರುತಿಸಲಾಗಿದೆ.

1) ಕೈಗಾರಿಕೆಗಳು ರೋಗಗ್ರಸ್ಥವಾಗಿರುವುದರಿಂದ / ಮುಚ್ಚಿರುವುದರಿಂದ

2) ಕಡಿಮೆ ಬಡ್ಡಿ ದರದ ಸಾಲ

3) ವಸೂಲಾತಿ ಮಾಡುವಲ್ಲಿ ಕಾರ್ಯ ವೈಫಲ್ಯತೆ

4) ಘಟಕಗಳು ಸಾಲವನ್ನು ಮರುಪಾವತಿಸಲು ಮುಂದಾಗದೇ ಇರುವುದು.

5) ಈ ಘಟಕಗಳಿಗೆ ಅವಧಿ/ದುಡಿಮೆ ಬಂಡವಾಳ ನೀಡಿರುವ ಹಣಕಾಸು ಸಂಸ್ಥೆ/ಬ್ಯಾಂಕುಗಳು ಈ ಘಟಕಗಳನ್ನು ಇತರರಿಗೆ ಮಾರಾಟ ಮಾಡಿರುವುದು ಇತ್ಯಾದಿಗಳಿರುತ್ತವೆ.

ಈ ಹಿನ್ನೆಲೆಯಲ್ಲಿ ಪುನಃ ಓ.ಟಿ.ಎಸ್. ಯೋಜನೆಯನ್ನು ಜಾರಿಗೆ ತಂದಲ್ಲಿ ಕನಿಷ್ಟ 150 ಘಟಕಗಳು ಸಾಲ ಮರು ಪಾವತಿ ಮಾಡುವ ಸಾಧ್ಯತೆ ಇದ್ದು, ರೂ. 10.00 ಕೋಟಿವರೆಗೆ ಸಾಲ ವಸೂಲಾಗುವ ಸಾಧ್ಯತೆ ಇರುತ್ತದೆ. ಅದರಂತೆ ಆಯುಕ್ತರು ಮೇಲೆ (5) ರಲ್ಲಿ ಓದಲಾದ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಅವರ ಪ್ರಸ್ತಾವನೆಯಲ್ಲಿ ಓ.ಟಿ.ಎಸ್. ಯೋಜನೆಗಳ ಮುಖ್ಯಾಂಶಗಳನ್ನು ಈ ಕೆಳಕಂಡಂತೆ ನೀಡಿರುತ್ತಾರೆ.

ಈ ಯೋಜನೆಯು ಸರ್ಕಾರದ ಆದೇಶ ದಿನಾಂಕದಿಂದ ಮೂರು ತಿಂಗಳು ಜಾರಿಯಲ್ಲಿರುತ್ತದೆ. ಈ ಬಗ್ಗೆ ವ್ಯಾಪಕ ಪ್ರಚಾರ ನೀಡುವುದು ಹಾಗೂ ಪ್ರತಿ ಘಟಕಗಳಿಗೆ ತಿಳುವಳಿಕೆ ಪತ್ರವನ್ನು Under Certificate of Posting ಮೂಲಕ ಕಳುಹಿಸುವುದು. ಈ 3 ತಿಂಗಳೊಳಗೆ ಇಚ್ಛೆಯುಳ್ಳ ಘಟಕವು ಕೆಳಕಂಡ, ಸಾಲ ಮರುಪಾವತಿಸುವ ವಿಧಾನಗಳಲ್ಲಿ ಒಂದು ವಿಧಾನವನ್ನು ಆಯ್ಕೆ ಮಾಡಿ, ಜಿಲ್ಲಾ ಕೈಗಾರಿಕಾ ಕೇಂದ್ರಕ್ಕೆ ಒಪ್ಪಿಗೆ ಪತ್ರ ಸಲ್ಲಿಸತಕ್ಕದ್ದು.

i. ಘಟಕವು ಪಡೆದಿರುವ ಪೂರ್ಣ ಅಸಲು ಬಾಕಿಯನ್ನು ಮೂರು ತಿಂಗಳಲ್ಲಿ ಮೂರು ಸಮ ಕಂತುಗಳಲ್ಲಿ ಮರು ಪಾವತಿ ಮಾಡಿದರೆ, ಬಾಕಿ ಇರುವ ಬಡ್ಡಿ/ಸುಸ್ತಿ ಬಡ್ಡಿಯನ್ನು ಪೂರ್ಣವಾಗಿ ಮನ್ನಾ ಮಾಡಲಾಗುವುದು.

ii. ಘಟಕವು ಪಡೆದಿರುವ ಪೂರ್ಣ ಅಸಲನ್ನು ಸರ್ಕಾರಕ್ಕೆ ಆರು ತಿಂಗಳೊಳಗೆ ಆರು ಸಮ ಕಂತುಗಳ ಪಾವತಿಸಿದ್ದಲ್ಲಿ ಶೇ. 50 ರಷ್ಟು ಬಡ್ಡಿ ಹಾಗೂ ಪೂರ್ಣ ಸುಸ್ತಿ ಬಡ್ಡಿ ಮನ್ನಾ ಮಾಡಲಾಗುವುದು. ಶೇ. 50 ರಷ್ಟು ಬಡ್ಡಿಯನ್ನು ಸಹಾ ಆರು ಸಮ ಕಂತುಗಳಲ್ಲಿ ಅಸಲಿನೊಂದಿಗೆ ಪಾವತಿಸುವುದು.

iii. ಘಟಕವು ಪಡೆದಿರುವ ಪೂರ್ಣ ಅಸಲನ್ನು ಸರ್ಕಾರಕ್ಕೆ ಒಂಭತ್ತು ತಿಂಗಳೊಳಗೆ ಒಂಭತ್ತು ಸಮ ಕಂತುಗಳಲ್ಲಿ ಪಾವತಿಸಿದಲ್ಲಿ ಶೇ. 25 ರಷ್ಟು ಬಡ್ಡಿ ಹಾಗೂ ಪೂರ್ಣ ಸುಸ್ತಿಬಡ್ಡಿ ಮನ್ನಾ ಮಾಡಲಾಗುವುದು. ಶೇ.75 ರಷ್ಟು ಬಡ್ಡಿಯನ್ನು ಒಂಭತ್ತು ಸಮ ಕಂತುಗಳಲ್ಲಿ ಅಸಲಿನೊಂದಿಗೆ ಪಾವತಿಸುವುದು.

ಮೇಲ್ಕಂಡ ಪ್ರಸ್ತಾಪನೆಯನ್ನು ಸರ್ಕಾರವು ಸುದೀರ್ಘವಾಗಿ ಪರಿಶೀಲಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಐ 99 ಸಪ್ರಕೈ 2010 ಬೆಂಗಳೂರು, ದಿನಾಂಕ: 30.09.2011**

ಮೇಲೆ ಪ್ರಸ್ತಾವನೆಯಲ್ಲಿ ತಿಳಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಸರ್ಕಾರವು ಏಕಗಂಟು ತೀರುವಳಿ ಯೋಜನೆಯನ್ನು ಈ ಆದೇಶ ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ಅನುಷ್ಠಾನಗೊಳಿಸಲು ಈ ಕೆಳಕಂಡ ಷರತ್ತುಗಳನ್ವಯ ಅನುಮೋದನೆ ನೀಡಿದೆ.

a. ಈ ಯೋಜನೆಯು ದಿನಾಂಕ: 31.03.2012 ರ ವರೆಗೆ ಮಾತ್ರ ಜಾರಿಯಲ್ಲಿರುತ್ತದೆ. ಈ ಬಗ್ಗೆ ವ್ಯಾಪಕ ಪ್ರಚಾರ ನೀಡುವುದು ಹಾಗೂ ಪ್ರತಿ ಘಟಕಗಳಿಗೆ ತಿಳುವಳಿಕೆ ಪತ್ರವನ್ನು Under Certificate of Posting ಮೂಲಕ ಕಳುಹಿಸುವುದು. ಈ ಅವಧಿಯೊಳಗೆ ಇಚ್ಛೆಯುಳ್ಳ ಘಟಕವು ಕೆಳಕಂಡ, ಸಾಲ ಮರುಪಾವತಿಸುವ ವಿಧಾನಗಳಲ್ಲಿ ಒಂದು ವಿಧಾನವನ್ನು ಆಯ್ಕೆ ಮಾಡಿ, ಜಿಲ್ಲಾ ಕೈಗಾರಿಕಾ ಕೇಂದ್ರಕ್ಕೆ ಒಪ್ಪಿಗೆ ಪತ್ರ ಸಲ್ಲಿಸತಕ್ಕದ್ದು.

   i. ಈ ಯೋಜನೆಯು ಮಾರಾಟ ತೆರಿಗೆ ವಿನಾಯಿತಿ ಬದಲಿಗೆ ಘಟಕವು ಪಡೆದಿರುವ ಯಾವುದೇ ಇತರ ಸಾಲಗಳನ್ನು ಹೊರತುಪಡಿಸಿ, ಅಭಿವೃದ್ಧಿ ಸಾಲ ಮತ್ತು ದುಡಿಮೆ ಬಂಡವಾಳ ಸಾಲಗಳಿಗೆ ಮಾತ್ರ ಸೀಮಿತವಾಗಿರುತ್ತದೆ.

   ii. ಘಟಕವು ಪಡೆದಿರುವ ಪೂರ್ಣ ಅಸಲು ಬಾಕಿಯನ್ನು ದಿನಾಂಕ: 31.12.2011 ರೊಳಗೆ ಪೂರ್ಣವಾಗಿ ಮರು ಪಾವತಿ ಮಾಡಿದರೆ, ಬಾಕಿ ಇರುವ ಬಡ್ಡಿ/ಸುಸ್ತಿ ಬಡ್ಡಿಯನ್ನು ಪೂರ್ಣವಾಗಿ ಮನ್ನಾ ಮಾಡಲಾಗುವುದು.

   iii. ಘಟಕವು ಪಡೆದಿರುವ ಪೂರ್ಣ ಅಸಲನ್ನು ಶೇ. 25% ರಷ್ಟು ಬಡ್ಡಿ ಹಾಗೂ ಸುಸ್ತಿ ಬಡ್ಡಿಯೊಂದಿಗೆ ದಿನಾಂಕ: 01.01.2012 ರಿಂದ 31.03.2012 ರೊಳಗೆ ಪಾವತಿಸಿದಲ್ಲಿ ಶೇ. 75% ರಷ್ಟು ಬಡ್ಡಿ ಮತ್ತು ಸುಸ್ತಿ ಬಡ್ಡಿಯನ್ನು ಮನ್ನಾ ಮಾಡಲಾಗುವುದು.

   iv. ಘಟಕವು ಈ ಆದೇಶ ಹೊರಡಿಸುವವರೆಗೆ ಪಾವತಿಸಿರುವ ಬಡ್ಡಿ ಮತ್ತು ಸುಸ್ತಿ ಬಡ್ಡಿಯನ್ನು ಅಸಲು ಪಾವತಿಗೆ ಲೆಕ್ಕ ಹಾಕಲಾಗುವುದಿಲ್ಲ.

b. ಸಂಬಂಧಿಸಿದ ಜಿಲ್ಲಾ ಕೈಗಾರಿಕಾ ಕೇಂದ್ರದ ಜಂಟಿ ನಿರ್ದೇಶಕರು, ಘಟಕಗಳು ನೀಡುವ ಒಪ್ಪಿಗೆ ಪತ್ರಗಳನ್ವಯ 15 ದಿವಸಗಳೊಳಗಾಗಿ ಇವರು ಪಾವತಿಸಬೇಕಾದ ಅಸಲು, ಬಡ್ಡಿ, ಸುಸ್ತಿ ಬಡ್ಡಿಯನ್ನು ಸರ್ಕಾರಿ ಆದೇಶ ಹೊರಡಿಸಿದ ದಿನಾಂಕದ ಹಿಂದಿನ ತಿಂಗಳಿನ ಅಂತ್ಯದವರೆಗೆ ಲೆಕ್ಕಾಚಾರ ಮಾಡಿ ಘಟಕದವರು ಆಯ್ದುಕೊಂಡ ಮರುಪಾವತಿ ವಿಧಾನದಂತೆ ಇವರಿಗೆ ಸಾಲ ಮರುಪಾವತಿಸಲು ಕಚೇರಿ ಆದೇಶ ಹೊರಡಿಸುವುದು.

c. ಜಂಟಿ ನಿರ್ದೇಶಕರು ಹೊರಡಿಸುವ ಆದೇಶದಂತೆ, ಘಟಕದವರು ಸಾಲವನ್ನು ಮರುಪಾವತಿಸುವುದು.

d. ಒಂದು ವೇಳೆ ಘಟಕದವರು ಆಯ್ದುಕೊಂಡ ವಿಧಾನದಂತೆ, ಕಂತುಗಳನ್ನು ಕಟ್ಟಲು ವಿಫಲರಾದರೆ, ಈ ರೀತಿ ಕಟ್ಟಿರುವ ಕಂತುಗಳ ಹಣವನ್ನು ಈ ಹಿಂದೆ ನಿಗಧಿ ಪಡಿಸಿದ್ದ, ಬಡ್ಡಿ ದರಕ್ಕೆ ಹೊಂದಾಣಿಕೆ ಮಾಡುವುದು.

e. ಘಟಕಗಳು ಸಾಲವನ್ನು ಕಟ್ಟದೇ ಬಾಕಿ ಉಳಿಸಿಕೊಂಡಲ್ಲಿ, ಈ ಪ್ರಕರಣಗಳ ಬಗ್ಗೆ ಭೂ ಕಂದಾಯ ಕಾಯಿದೆ ಅನುಸರಿಸಿ ಬಾಕಿ ಇರುವ ಸಾಲವನ್ನು ವಸೂಲಾತಿ ಮಾಡಲು ಜಂಟಿ ನಿರ್ದೇಶಕರುಗಳು ಕ್ರಮವಹಿಸುವುದು.

f. ಬಾಕಿ ಇರುವಂತಹ ಸಾಲದ ಬಾಬ್ತಿನ ಮೇಲೆ ಯಾವುದೇ ವ್ಯಾಜ್ಯ ಪ್ರಕರಣಗಳು ಇಲ್ಲದಿರುವ ಪ್ರಕರಣಗಳಿಗೆ ಮಾತ್ರ ಓ.ಟಿ.ಎಸ್. ಯೋಜನೆ ಅನ್ವಯಿಸುತ್ತದೆ.

g. ವಿಶೇಷ ವರ್ಗಗಳಾದ ಎಸ್.ಸಿ/ಎಸ್.ಟಿ/ಅಲ್ಪಸಂಖ್ಯಾತರು ಹಾಗೂ ರೋಗಗ್ರಸ್ತ ಕೈಗಾರಿಕೆಗಳ ಪುನಃಶ್ಚೇತನ ನೀತಿಯಡಿ ಪುನಃಶ್ಚೇತನಗೊಳಿಸಿದಂತಹ ಘಟಕಗಳ ಉದ್ಯಮಿದಾರರಿಗೆ ಜೂನ್ 2012 ರ ವರೆಗೆ ಪಾವತಿಸಲು ಹಾಗೂ ಅಂತಹ ಘಟಕಗಳಿಗೆ ಪೂರ್ತಿ ಬಡ್ಡಿ ಮತ್ತು ಸುಸ್ತಿ ಬಡ್ಡಿ ಮನ್ನಾ ಮಾಡುವುದು.

h. ಸರ್ಕಾರ ನಿಗದಿಪಡಿಸಿದ ಬಡ್ಡಿಯನ್ನು ಮಾರಟೋರಿಯಮ್ ಕಾಲಾವಧಿಯಲ್ಲಿ ಲೆಕ್ಕ ಮಾಡುವಂತಿಲ್ಲ.

ಈ ಆದೇಶವನ್ನು ಸಚಿವ ಸಂಪುಟದ ಪ್ರ. ಸಂ: ಸಿ:420: 2011, ದಿನಾಂಕ: 13.09.2011, ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್‌ಡಿ 1405 ವೆ–1/2010, ದಿನಾಂಕ: 30.06.2011 ರಲ್ಲಿನ ಅನುಮೋದನೆಗಳನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ. ವಿ. ಶ್ರೀನಿವಾಸ ದೀಕ್ಷಿತ್**
ಪೀಠಾಧಿಕಾರಿ (ತಾಂತ್ರಿಕ ಕೋಶ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಶುಕ್ರವಾರ, ಅಕ್ಟೋಬರ್ ೧೪, ೨೦೧೧ (ಆಶ್ವಯುಜ ೨೨, ಶಕ ವರ್ಷ ೧೯೩೩) | ನಂ. ೮೨೫ |
|---|---|---|

## ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಕವಿಪ:ಶಾರಶಾ:1261:ಸರಾ:11, ಬೆಂಗಳೂರು, ದಿನಾಂಕ: 14ನೇ ಅಕ್ಟೋಬರ್, 2011**

ಕರ್ನಾಟಕ ವಿಧಾನ ಪರಿಷತ್ತಿನ ಸದಸ್ಯಸರಾದ ಶ್ರೀ ಎನ್.ಶಂಕ್ರಪ್ಪ ಅವರು ವಿಧಾನ ಪರಿಷತ್ತಿನ ಸದಸ್ಯತ್ವ ಸ್ಥಾನಕ್ಕೆ ದಿನಾಂಕ: 14ನೇ ಅಕ್ಟೋಬರ್, 2011 ರಂದು ರಾಜೀನಾಮೆಯನ್ನು ಸಲ್ಲಿಸಿದ್ದು, ಸದರಿ ರಾಜೀನಾಮೆಯನ್ನು ಮಾನ್ಯ ಸಭಾಪತಿಯವರು ಕರ್ನಾಟಕ ವಿಧಾನ ಪರಿಷತ್ತಿನ ಕಾರ್ಯವಿಧಾನ ಹಾಗೂ ನಡವಳಿಕೆಯ ನಿಯಮ 185(2)ರ ಮೇರೆಗೆ ಅಂಗೀಕರಿಸಿರುತ್ತಾರೆ.

**ವಿ. ಶ್ರೀಶ್**
ಕಾರ್ಯದರ್ಶಿ
ಕರ್ನಾಟಕ ವಿಧಾನ ಪರಿಷತ್ತು

## KARNATAKA LEGISLATIVE COUNCIL SECRETARIAT

**NOTIFICATION**

**No. KLC/Sharasha/1261/MR/2011, Bangalore, Dated: 14th October, 2011**

Sri N. Shankrappa, Member of Karnataka Legislative Council tendered resignation to his Membership of the Legislative Council on 14th October, 2011. The Hon'ble Chairman, Legislative Council has accepted the resignation as per rule 185(2) of the Rules of Procedure and Conduct of Business in Karnataka Legislative Council.

**V. SHREESH**
Secretary
Karnataka Legislative Council

# ವಿಶೇಷ ಪತ್ರಿಕೆ

| ಭಾಗ – I | ಬೆಂಗಳೂರು, ಮಂಗಳವಾರ, ಅಕ್ಟೋಬರ್ ೧೮, ೨೦೧೧ (ಆಶ್ವಯುಜ ೨೬, ಶಕ ವರ್ಷ ೧೯೩೩) | ನಂ. ೮೨೨ |
|---|---|---|

## ಕರ್ನಾಟಕ ಸರ್ಕಾರದ ನಡವಳಿಕೆಗಳು

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ** : ರಾಜ್ಯದಲ್ಲಿ ಸಾಮಾಜಿಕ ಆರ್ಥಿಕ ಮತ್ತು ಜಾತಿ ಗಣತಿ –2011 (SECC-2011) ನಡೆಸಲು ಅನುದಾನವನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ** :
1) ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ:Q–16025/8/2006–A1(RD) (Pt.), ದಿನಾಂಕ: 28–09–2011.
2) ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ; Q–16025/8/2006–A1(RD) (Pt.), ದಿನಾಂಕ: 31–03–2010.
3) ಸರ್ಕಾರದ ಸುತ್ತೋಲೆ ಸಂಖ್ಯೆ ಗ್ರಾಅಪ 29 ಎಸ್‌ಜೆವೈ 2011(ಎ–1), ದಿನಾಂಕ: 28/29–09–2011.
4) ಸರ್ಕಾರದ ಪತ್ರದ ಸಂಖ್ಯೆ ಗ್ರಾಅಪ 32 ಎಸ್‌ಜೆವೈ 2011 ದಿ:04–10–2011.

**ಪ್ರಸ್ತಾವನೆ:**

ಕೇಂದ್ರ ಸರ್ಕಾರದ ಮಾರ್ಗಸೂಚಿಯಂತೆ ರಾಜ್ಯದಲ್ಲಿ ಸಾಮಾಜಿಕ ಆರ್ಥಿಕ ಮತ್ತು ಜಾತಿ ಗಣತಿ –2011 (SECC-2011) ನಡೆಸಲು ತೀರ್ಮಾನಿಸಿದೆ. ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ಓದಲಾಗಿದೆ (2)ರಲ್ಲಿ ದಿನಾಂಕ:31–03–2010 ರಂದು ₹.620.62 ಲಕ್ಷಗಳು ಬಿಡುಗಡೆ ಮಾಡಿದೆ. ಓದಲಾಗಿದೆ (1)ರಲ್ಲಿ ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ರಾಜ್ಯ ಮಟ್ಟದಲ್ಲಿ ನಿರ್ದೇಶಕರು (ಸ್ವಉಕಾ),

ಗ್ರಾಮೀಣಾಭಿವೃದ್ಧಿ ಇಲಾಖೆಯಲ್ಲಿ ತೆರೆದಿರುವ ಬ್ಯಾಂಕ್ ಖಾತೆ ನಂ.64084063002 ಗೆ ₹.5896.08 ಲಕ್ಷಗಳನ್ನು ವರ್ಗಾವಣೆ ಮಾಡಿದೆ. ಓದಲಾಗಿದೆ (3)ರ ಸುತ್ತೋಲೆಯಲ್ಲಿ ಜಿಲ್ಲಾಧಿಕಾರಿಗಳಿಗೆ SECC-2011 ಕ್ಕಾಗಿಯೇ ಪ್ರತ್ಯೇಕ ಬ್ಯಾಂಕ್ ಖಾತೆ ತೆರೆದು ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಿಗೆ ಬಿಡುಗಡೆಯಾಗಿದ್ದ ಅನುದಾನದಲ್ಲಿ ಪೈಲೆಟ್ ಗಣತಿಗೆ ಮತ್ತು ಪ್ರಸಕ್ತ ಗಣತಿಗೆ ಈವರೆವಿಗೆ ಖರ್ಚಾಗಿರುವ ಅನುದಾನ ಹೊರತುಪಡಿಸಿ ಉಳಿಕೆ ಹಣವನ್ನು ಆಯಾ ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಿಂದ ವರ್ಗಾಯಿಸಿಕೊಳ್ಳಲು ಸೂಚಿಸಲಾಗಿತ್ತು. ರಾಜ್ಯದಲ್ಲಿ SECC-2011 ನಡೆಸಲು ರಾಜ್ಯದ ಎಲ್ಲಾ ಪ್ರಧಾನ SECC-2011 ರ ಅಧಿಕಾರಿಗಳಿಗೆ ಗಣತಿಗಾಗಿ ಅಂದಾಜಿಸಿದ ಅನುದಾನದ ಶೇಕಡ 50 ರಷ್ಟು, ಒಂದನೇ ಕಂತಿನ ಅನುದಾನವಾಗಿ ₹.3010.00 ಲಕ್ಷಗಳನ್ನು (₹.ಮೂವತ್ತು ಕೋಟಿ ಹತ್ತು ಲಕ್ಷಗಳು ಮಾತ್ರ) ಬಿಡುಗಡೆ ಗೊಳಿಸಬೇಕಾಗಿದೆ. ಅದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ ಗ್ರಾಅಪ 10 ಎಸ್‌ಜೆವೈ 2010(ಎ-1), ಬೆಂಗಳೂರು, ದಿನಾಂಕ: 17-10-2011**

ರಾಜ್ಯ ಸರ್ಕಾರವು ಸಾಮಾಜಿಕ ಆರ್ಥಿಕ ಮತ್ತು ಜಾತಿ ಗಣತಿ -2011 (SECC-2011) ನಡೆಸಲು ಅನುಬಂಧದಲ್ಲಿ ತೋರಿಸಿರುವ ಎಲ್ಲಾ ಪ್ರಧಾನ SECC-2011 ರ ಅಧಿಕಾರಿಗಳಿಗೆ ₹.3010.00 ಲಕ್ಷಗಳು (₹.ಮೂವತ್ತು ಕೋಟಿ ಹತ್ತು ಲಕ್ಷಗಳು ಮಾತ್ರ) ಅನುದಾನವನ್ನು ಕೆಳಕಂಡ ಷರತ್ತುಗಳಿಗೊಳಪಟ್ಟು ಮಂಜೂರಾತಿ ನೀಡಿ ಬಿಡುಗಡೆ ಮಾಡಿದೆ.

**ಷರತ್ತುಗಳು:**

- ಸಾಮಾಜಿಕ ಆರ್ಥಿಕ ಮತ್ತು ಜಾತಿ ಗಣತಿ -2011 ಗಾಗಿಯೇ ಪ್ರತ್ಯೇಕ ಬ್ಯಾಂಕ್ ಖಾತೆ ತೆರೆಯತಕ್ಕದ್ದು.
- ಅನುದಾನವನ್ನು ರಾಜ್ಯ ಮಟ್ಟದಲ್ಲಿ ತೆರೆದಿರುವ State Bank of Mysore, G SEVA Branch, ನಲ್ಲಿ ತೆರೆದಿರುವ ಬ್ಯಾಂಕ್ ಖಾತೆ ನಂ.64084063002 ಯಿಂದ ಪ್ರಧಾನ SECC-2011 ರ ಅಧಿಕಾರಿಗಳು ತೆರೆದಿರುವ ಬ್ಯಾಂಕ್ ಖಾತೆಗೆ ವರ್ಗಾಯಿಸಲಾಗುವುದು.
- ಸಾಮಾಜಿಕ ಆರ್ಥಿಕ ಮತ್ತು ಜಾತಿ ಗಣತಿ-2011ಕ್ಕೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಮಾರ್ಗಸೂಚಿಯಂತೆಯೇ ಅನುದಾನವನ್ನು ಉಪಯೋಗಿಸತಕ್ಕದ್ದು.
- ಗಣತಿಗಾಗಿ ಬಿಡುಗಡೆ ಮಾಡಿದ ಅನುದಾನವನ್ನು ಬೇರೆ ಯಾವ ಉದ್ದೇಶಗಳಿಗೂ ಬಳಸದೇ ಕೇಂದ್ರ ಮತ್ತು ರಾಜ್ಯ ಸಕಾರಗಳು ಅಗಿಂದಾಗ್ಗೆ ನೀಡುವ ಸೂಚನೆಗಳನ್ವಯ ವೆಚ್ಚ ಮಾಡುವುದು.
- ಗಣತಿಗೆ ಬೇಕಾಗಬಹುದಾದ ವೆಚ್ಚವನ್ನು ಮಾರ್ಗಸೂಚಿಯನ್ವಯ ಅಂದಾಜು ಮಾಡಿ ಸಲ್ಲಿಸತಕ್ಕದ್ದು. ಅಂದಾಜು ವೆಚ್ಚದನ್ವಯ ಉಳಿಕೆ ಅನುದಾನವನ್ನು ಬಿಡುಗಡೆಗೊಳಿಸಲು ಕ್ರಮವಹಿಸಲಾಗುವುದು.
- ಬಿಡುಗಡೆಗೊಳಿಸಿದ ಅನುದಾನಕ್ಕೆ ಆಯುಕ್ತರು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ (BBMP), ಬೆಂಗಳೂರು ಹಾಗೂ ಮೈಸೂರು, ಹುಬ್ಬಳ್ಳಿ-ಧಾರವಾಡ, ಮಂಗಳೂರು, ಬೆಳಗಾಂ, ಗುಲ್ಬರ್ಗ, ಬಳ್ಳಾರಿ, ದಾವಣಗೆರೆ ಮಹಾನಗರಪಾಲಿಕೆ ಆಯುಕ್ತರುಗಳು ಉಪಯೋಗ ಪ್ರಮಾಣ ಪತ್ರವನ್ನು ಆಯುಕ್ತರು, ಪೌರಾಡಳಿತ ನಿರ್ದೇಶನಾಲಯ, ವಿವಿ ಟವರ್, ಬೆಂಗಳೂರು ಇವರ ಮೂಲಕ ಸಲ್ಲಿಸುವುದು.
- ರಾಜ್ಯದ ಎಲ್ಲಾ ಜಿಲ್ಲಾಧಿಕಾರಿಗಳು ಬಿಡುಗಡೆಗೊಳಿಸಿದ ಅನುದಾನಕ್ಕೆ ಉಪಯೋಗ ಪ್ರಮಾಣ ಪತ್ರವನ್ನು ರಾಜ್ಯದ ನೋಡಲ್ ಅಧಿಕಾರಿಯಾದ ನಿರ್ದೇಶಕರು (ಸ್ವಉಕಾ), ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ರವರಿಗೆ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಅಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ರವರ ಸಹಮತಿ ಸಂಖ್ಯೆ ಗ್ರಾಅಪ 03 ಆಂ.ಆ.ಸ 2011-12 ದಿನಾಂಕ: 14-10-2011 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ.

**ಅಮಿತಾ ಪ್ರಸಾದ್**
ಸರ್ಕಾರದ ಪ್ರಧಾನ ಕಾರ್ಯದರ್ಶಿ
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

